# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

Approved for Libraries of Middle Schools
T. B. C. 220 of 34-35 D 11-6-1935.

For Religious and Moral Instruction in
Primary Schools No. 61, D. 5-12-1924.

● ಈ ಗ್ರಂಥಮಾಲೆಯಲ್ಲಿ ಪೌರಾಣಿಕ, ಐತಿಹಾಸಿಕ, ಆಧುನಿಕ ಕಾಲಗಳಲ್ಲಿ ದೇಶೋದ್ಧಾರ, ಧರ್ಮೋದ್ಧಾರಗಳಿಗಾಗಿ ಶ್ರಮಿಸಿ ನಮ್ಮ ಮಾತೃಭೂಮಿಯಲ್ಲಿ ಪ್ರಾತಃಸ್ಮರಣೀಯರೂ, ಯಶಃಕಾಯರೂ ಆದ ಸುಪ್ರಸಿದ್ಧ ದೇಶಭಕ್ತರ, ದೈವಭಕ್ತರ, ವೀರರ, ಶೂರರ, ಉದಾರಚರಿತರ—ಅಲ್ಲದೆ, ಪುಣ್ಯಶೀಲೆಯರಾದ ಪತಿವ್ರತಾ ಶಿರೋಮಣಿಯರ ಪವಿತ್ರ ಜೀವನಚರಿತ್ರೆಗಳು ತಿಳಿಗನ್ನಡ ಭಾಷೆಯ ಸುಲಭ ಶೈಲಿಯಲ್ಲಿ ಬರೆಯಲ್ಪಟ್ಟಿವೆ. ಕರ್ನಾಟಕ ಮಾತಾಪಿತೃಗಳು ತಮ್ಮ ಮಕ್ಕಳಲ್ಲಿ ದೇಶಾಭಿಮಾನ - ಧರ್ಮಾಭಿಮಾನಗಳನ್ನುಂಟುಮಾಡಲು ಇವುಗಳಿಗಿಂತಲೂ ಸುಲಭ ಬೆಲೆಯ, ಉತ್ತಮ ಕನ್ನಡ ಪುಸ್ತಕಗಳು ಬೇರೆಲ್ಲೂ ದೊರಕವು.

* ಇದುವರೆಗೆ ೧೩೮ ಪುಸ್ತಕಗಳು ಪ್ರಕಟವಾಗಿವೆ.

**ಬೆಲೆ ಬಿಡಿ ಪ್ರತಿ ಒಂದಕ್ಕೆ ೦—೨—೦.**
**ದಪ್ಪರಟ್ಟಿನ ಲೈಬ್ರರಿ ಪ್ರತಿ ,, ೦—೨—೬.**

---

**ಸುಬೋಧ ಪ್ರಕಟನಾಲಯ,**
ಬೆಂಗಳೂರು ನಗರ.

*Approved for Mysore Middle School Examination of 1942-43*
*as a Text Book (Rapid Reading.)*

# ಮೈಸೂರಿನ ರಾಜ್ಯಲಕ್ಷ್ಮಿಯರು

ಮುನ್ನುಡಿಯ ಲೇಖಕರು :
ರಾಜಸೇವಾಸಕ್ತ
ಶ್ರೀಮಾನ್ **ಬಿ. ವೆಂಕಟನಾರಾಯಣಪ್ಪ** ಎಂ.ಎ ಅವರು
ನಿವೃತ್ತ ಪ್ರೊಫೆಸರ್, ಸೆಂಟ್ರಲ್ ಕಾಲೇಜು, ಬೆಂಗಳೂರು

ಗ್ರಂಥಕರ್ತರು :
**ಎಂ. ರಾಮರಾಯರು**
ಸಂಪಾದಕರು 'ಸುಬೋಧ'

ಪ್ರಕಾಶಕರು :
**ಸುಬೋಧ ಪ್ರಕಟನಾಲಯ**
ಬೆಂಗಳೂರು ನಗರ.



ಶ್ರೀಮನ್ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಒಡೆಯರವರು

ಶ್ರೀ ಲಕ್ಷ್ಮೀವಿಲಾಸ ಸನ್ನಿಧಾನದ

ಶ್ರೀಮನ್ಮಹಾರಾಣೀ ಶ್ರೀಪ್ರತಾಪಕುಮಾರಿ ದೇವಿಯವರು

ಆಳಿದ ಮಹಾಸ್ವಾಮಿಯವರಾದ

ಶ್ರೀ ಮನ್ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್,

ಜಿ.ಸಿ.ಎಸ್.ಐ., ಜಿ.ಬಿ.ಇ.,

ಅವರ ಸಹಧರ್ಮಿಣಿಯವರಾದ

ಮಹಾಮಾತೃಶ್ರೀ

**ಶ್ರೀ ಲಕ್ಷ್ಮೀವಿಲಾಸ ಸನ್ನಿಧಾನದ ಶ್ರೀಮನ್ಮಹಾರಾಣಿ**

**ಶ್ರೀ ಪ್ರತಾಪಕುಮಾರಿ ದೇವಿಯವರ**

ದಿವ್ಯ ಸನ್ನಿಧಾನಂಗಳಲ್ಲಿ

# ಮೈಸೂರಿನ ರಾಜ್ಯಲಕ್ಷ್ಮಿಯರು

ಎಂಬ ಈ ಚಿಕ್ಕ ಗ್ರಂಥವು

ಆ ಮಹಾತಾಯಿಯವರ ಪವಿತ್ರ ಜೀವಿತದಲ್ಲಿ ವ್ಯಕ್ತವಾಗುವ

ಪರಮ ಪಾತಿವ್ರತ್ಯ, ತೀವ್ರ ಭಗವದ್ಭಕ್ತಿ, ಧರ್ಮನಿಷ್ಠೆ,

ಸತ್ಯಪ್ರೇಮ, ಋಜುಭಾವ ಮುಂತಾದ ಅಮೂಲ್ಯ

ಸದ್ಗುಣಗಳ ಸವಿ ನೆನಪಿಗಾಗಿ

ಗ್ರಂಥಕರ್ತನಿಂದ

**ರಾಜಭಕ್ತಿಯುತ ಕಿರುಗಾಣಿಕೆಯಾಗಿ**

ಅಪ್ಪಣೆ ಪಡೆದು

ಸಮರ್ಪಿಸಲ್ಪಟ್ಟಿದೆ

# ಮುನ್ನುಡಿ

ಈ ಗ್ರಂಥಕರ್ತರಾದ ಶ್ರೀಮಾನ್ ಎಂ. ರಾಮರಾಯರು ಕನ್ನಡಿಗರಿಗೆ ಚಿರ ಪರಿಚಿತರು. ಇವರು ೧೯೧೫ನೆಯ ಇಸವಿಯಲ್ಲೇ 'ಸುಬೋಧ ಕುಸುಮಾಂಜಲಿ' ಎಂಬ ಗ್ರಂಥಮಾಲೆಯನ್ನು ಆರಂಭಿಸಿ ಇದುವರೆಗೆ ೧೩೪ ಪುಸ್ತಕಗಳನ್ನು ಪ್ರಕಟಗೊಳಿಸಿರುತ್ತಾರೆ. ಈ ಪುಸ್ತಕಗಳು ಸುಲಭವಾದ ತಿಳಿಗನ್ನಡದಲ್ಲಿ ಬರೆದುವಾಗಿ "ಭಾರತದೇಶದ ಪೌರಾಣಿಕ ಐತಿಹಾಸಿಕ ಮತ್ತು ಆಧುನಿಕ ಕಾಲದ ಮಹಾಪುರುಷರ ಮತ್ತು ಪತಿವ್ರತಾ ಶಿರೋಮಣಿಯರ ಪವಿತ್ರ ಜೀವನ ಚರಿತ್ರೆಗಳನ್ನು" ತಿಳಿಸುವಂಥವುಗಳಾಗಿವೆ. ಇವು ಬಾಲಕ ಬಾಲಿಕೆಯರಿಗೆ ಮಾತ್ರವಲ್ಲದೆ ದೊಡ್ಡವರಿಗೂ ಅನೇಕ ಐತಿಹಾಸಿಕ ಮತ್ತು ಆಧುನಿಕ ವಿಚಾರಗಳನ್ನು ಸಂಗ್ರಹವಾಗಿ ಬೋಧಿಸುವ ಸಣ್ಣ ಪುಸ್ತಕಗಳು. ಪ್ರತಿಯೊಂದರ ಬೆಲೆ ಎರಡು ಆಣೆ ಮಾತ್ರ. ಈ ಗ್ರಂಥಮಾಲೆಯ ಪುಸ್ತಕಗಳ ಕೆಲವು ಹೆಸರುಗಳನ್ನು ಹೇಳಿದರೆ ಗ್ರಂಥಕರ್ತರ ಉದ್ದೇಶವೇನೆಂಬುದು ಸ್ವಲ್ಪಮಟ್ಟಿಗೆ ತಿಳಿಯಬಹುದು: ಸಾವಿತ್ರಿ, ಭೀಷ್ಮ, ಕುಶಲವರು, ಚಂದ್ರಗುಪ್ತ ಚಾಣಕ್ಯರು, ಶ್ರೀ ಶಂಕರಾಚಾರ್ಯರು, ಕಂಠೀರವ ನರಸರಾಜ ಒಡೆಯರು, ಶ್ರೀ ಹರ್ಷ ಮಹಾರಾಜ, ಅಕ್ಬರ್ ಮಹಾಶಯ, ಈಶ್ವರಚಂದ್ರ ವಿದ್ಯಾಸಾಗರ, ಜೆ. ಎನ್. ತಾತಾ, ದಿವಾನ್ ರಂಗಾಚಾರ್ಲು, ಲಿಯೋ ಟಾಲ್‌ಸ್ಟಾಯ್, ಆಬ್ರಹಾಮ್ ಲಿಂಕನ್, ನೆಪೋಲಿಯನ್ ಬೋನಪಾರ್ಟ್, ಪಂಡಿತ ಮೋತೀಲಾಲ ನೆಹ್ರೂ - ಇವೇ ಮೊದಲಾದುವು.

ಇಷ್ಟೇ ಅಲ್ಲದೆ, ಶ್ರೀಮಾನ್ ರಾಮರಾಯರು ಈಗ ಹದಿನೈದು ವರ್ಷಗಳಿಂದಲೂ 'ಸುಬೋಧ' ಎಂಬ ಉತ್ತಮ ವರ್ಗದ ಕನ್ನಡ ಮಾಸಪತ್ರಿಕೆಯನ್ನು ಕ್ರಮವಾಗಿ ನಡಸಿಕೊಂಡು ಬರುತ್ತಿದ್ದಾರೆ; ಮತ್ತು ದಾಸಸಾಹಿತ್ಯ ಸಂಗ್ರಹ ಕಾರ್ಯವನ್ನು ಕೈಕೊಂಡು, 'ಶ್ರೀ ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ' ಎಂಬ ಹೆಸರಿನಿಂದ ಈ ಕೀರ್ತನೆಗಳನ್ನು ಎಂಟು ಭಾಗಗಳಲ್ಲಿ (ಸುಮಾರು ೨,೦೦೦ ಪುಟಗಳಲ್ಲಿ) ಪ್ರಕಟಪಡಿಸಿ, ಅದಕ್ಕೆ ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಪ್ರೋತ್ಸಾಹವನ್ನು ಪಡೆದಿರುತ್ತಾರೆ. ಕನ್ನಡದಲ್ಲಿ ಪುಸ್ತಕ ಪ್ರಚಾರವು ಆದಾಯಕರವಾದುದಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯ. ಹೀಗಿದ್ದರೂ ಶ್ರೀಮಾನ್ ರಾಮರಾಯರು ಎದೆಗುಂದದೆ, ಇಷ್ಟು ದೀರ್ಘಕಾಲದಿಂದ ಈ ಕಾರ್ಯವನ್ನು ನಡಸಿಕೊಂಡು ಬರುತ್ತಿರುವುದು ಅವರ ನಿಷ್ಠೆಯನ್ನು ತೋರಿಸುತ್ತದೆ.

ಇನ್ನು, ಪ್ರಕೃತ ಗ್ರಂಥದ ವಿಚಾರ: ಇದರಲ್ಲಿ ನಮ್ಮ ಮೈಸೂರು ರಾಜ್ಯದ ಮೂವರು ರಾಜ್ಯಲಕ್ಷ್ಮಿಯರ ಚರಿತ್ರೆಯನ್ನು ಕನ್ನಡಿಗರೆಲ್ಲರೂ ತಿಳಿದು ಸಂತೋಷವನ್ನೂ ಹೆಮ್ಮೆಯನ್ನೂ ಪಡೆಯಬೇಕೆಂಬ ಅಭಿಲಾಷೆಯಿಂದ ಶ್ರೀಮಾನ್ ರಾಮರಾಯರು ಚರಿತ್ರಾಂಶಗಳನ್ನೆತ್ತಿಕೊಂಡು ತಮಗೆ ಸಹಜವಾದ ಸುಲಭ ಶೈಲಿಯಲ್ಲಿ ಓದುವವರ ಮನಮುಟ್ಟುವಂತೆ ಕಥಾರೂಪವಾಗಿ ಬರೆದಿರುತ್ತಾರೆ. ಈ ಮೂವರ ಚರಿತ್ರೆಯಲ್ಲಿ ಮೊದಲನೆಯದಾದ ಮಹಾಮಾತೃಶ್ರೀ ದೇವಾಜಮ್ಮಣ್ಣಿಯವರ ಚರಿತ್ರೆಯೇ ಈ ಗ್ರಂಥದ ಮುಕ್ಕಾಲು

ಭಾಗವನ್ನು ನ್ಯಾಯವಾಗಿ ಆಕ್ರಮಿಸಿದೆ. ಹದಿನಾಲ್ಕನೆಯ ಶತಮಾನದ ಅಂತ್ಯಭಾಗದಲ್ಲಿ, ಮೈಸೂರಿನ ಪ್ರಭುಗಳಾಗಿದ್ದ ಶ್ರೀ ಚಾಮರಾಜರವರು ಪುತ್ರಸಂತಾನವಿಲ್ಲದೆ ದಿವಂಗತರಾದಾಗ, ದೇಶದ ಪರಿಸ್ಥಿತಿಯು ಬಹಳ ಶೋಚನೀಯವಾಗಿದ್ದಿತು. ಆಗ ಅತ್ಯಂತ ಪ್ರಬಲನಾಗಿದ್ದ ಮಾರನಾಯಕನೆಂಬ ಹೀನ ಕುಲದ ದಂಡನಾಯಕನು ಬಹಳ ದುಷ್ಟನಾಗಿ ರಾಜ್ಯವನ್ನಾಕ್ರಮಿಸಿ ರಾಜಪುತ್ರಿಯನ್ನು ಮದುವೆಯಾಗಬೇಕೆಂದು ಹವಣಿಸುತ್ತಿದ್ದ ಸಂದರ್ಭದಲ್ಲಿ, ಅದನ್ನು ನಿವಾರಿಸಲು ಶ್ರೀಮನ್ಮಹಾರಾಣಿ ದೇವಾಜಮ್ಮಣ್ಣಿಯವರು ತೋರಿಸಿದ ಧೈರ್ಯ ಸ್ಥೈರ್ಯ ಸಾಹಸಗಳೂ ಜಾಣ್ಮೆಯೂ ಅಸಾಮಾನ್ಯವಾದುವು. ಶ್ರೀ ಚಾಮುಂಡಾಂಬಿಕೆಯ ಅನುಗ್ರಹದಿಂದ ಆಕೆ ಪಟ್ಟ ಶ್ರಮವು ಫಲಿಸಿ ನಮ್ಮ ದೇಶದಲ್ಲಿ ಯದುಸದ್ವಂಶ ಸ್ಥಾಪನೆಯಾಗಿ ಉತ್ತರೋತ್ತರಾಭಿವೃದ್ಧಿ ಹೊಂದುತ್ತಿರುವುದು ನಮ್ಮ ಭಾಗ್ಯೋದಯ. ಎರಡನೆಯ ರಾಜ್ಯಲಕ್ಷ್ಮಿಯು ಮಹಾರಾಣಿ ಶ್ರೀ ಲಕ್ಷ್ಮಮ್ಮಣ್ಣಿಯವರು. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ತಮ್ಮ ವಶಮಾಡಿಕೊಂಡಿದ್ದ ರಾಜ್ಯವನ್ನು ಮರಳಿ ಪಡೆಯಲು ಆಕೆ ಮಾಡಿದ ಸಾಹಸವು ಎಂಥಾವರನ್ನೂ ಆಶ್ಚರ್ಯಗೊಳಿಸತಕ್ಕಂಥದು. ಮೂರನೆಯ ರಾಜ್ಯಲಕ್ಷ್ಮಿಯೆಂದರೆ ದಿವಂಗತ ನಮ್ಮ ನಾಲ್ವಡಿ ಶ್ರೀಕೃಷ್ಣಭೂಪರ ಮಾತೃಶ್ರೀಯವರು. ಈ ಮಹಾಮಾತೆಯು ಶ್ರೀಕೃಷ್ಣರಾಜೇಂದ್ರರ ಬಾಲ್ಯದಲ್ಲಿ ಎಂಟು ವರ್ಷಗಳ ಕಾಲ ರಾಜ್ಯಭಾರಮಾಡಿ ದೇಶವನ್ನು ನಾನಾ ಮುಖಗಳಲ್ಲಿ ಅಭಿವೃದ್ಧಿಗೆ ತಂದುದು ಎಲ್ಲರಿಗೂ ತಿಳಿದ ವಿಷಯವಾಗಿದೆ.

ಇಂತಹ ಚಾರಿತ್ರಿಕ ವಿಷಯಗಳಿಗೆ ನಮ್ಮ ಸ್ಕೂಲು ಪಾಠ ಪುಸ್ತಕಗಳಲ್ಲಿ ತಕ್ಕಷ್ಟು ಸ್ಥಳ ದೊರೆಯದುದರಿಂದ ಜನಸಾಮಾನ್ಯರಿಗೆ ಇಂತಹ ಅಮೂಲ್ಯವಾದ ಸಂಗತಿಗಳು ತಿಳಿಯಲು ಅವಕಾಶವಿಲ್ಲದಂತಾಗಿದೆ. ಈ ಕೊರತೆಯನ್ನು ಹೋಗಲಾಡಿಸಲು ಶ್ರೀಮಾನ್ ಸುಬೋಧ ರಾಮರಾಯರು ಪ್ರಯಾಸಪಡುತ್ತಿರುವುದು ಸ್ತೋತ್ರಾರ್ಹವಾದುದು. ಕಥಾರೂಪವಾಗಿ ಬರೆದಿರುವ ಈ ಚರಿತ್ರೆಯನ್ನು ಹೆಚ್ಚುಮಂದಿ ಕನ್ನಡಿಗರು ಓದಿ ಆನಂದಪಡುವುದರಿಂದ ಗ್ರಂಥಕರ್ತರ ಶ್ರಮವನ್ನು ಸಫಲಗೊಳಿಸುವರೆಂದು ಹಾರೈಸುತ್ತೇನೆ.

ಬೆಂಗಳೂರು
೧೯೪೦ನೆಯ ಡಿಸೆಂಬರು ತಾ॥ ೧

**ಬೆಳ್ಳಾವೆ ವೆಂಕಟನಾರಾಯಣಪ್ಪ**

# ಲೇಖಕನ ನಾಲ್ಕು ಮಾತು

'ಮೈಸೂರಿನ ರಾಜ್ಯಲಕ್ಷ್ಮಿಯರು' ಎಂಬೀ ಗ್ರಂಥವು ಮೈಸೂರು ದೇಶದ ಒಂದಾನೊಂದು ಚಾರಿತ್ರಿಕ ವಿಚಾರವನ್ನು ಅವಲಂಬಿಸಿ ಬರೆದ ಒಂದು ಕಥೆ. ಅಪೂರ್ವವೂ ವಿಚಿತ್ರವೂ ಆದ ಸನ್ನಿವೇಶಗಳನ್ನೊಳಗೊಂಡ ವಿಸ್ತಾರವಾದ ಈ ದೇಶಚರಿತ್ರೆಯಲ್ಲಿ ಅದರ ಅಭ್ಯುದಯ ಅವನತಿ, ಅಳಿವು ಉಳಿವು, ಇವುಗಳ ಕಾರ್ಯಕಾರಣಗಳನ್ನು ಕುರಿತು ವಿವೇಚನೆ ನಡೆಯಿಸಿದಲ್ಲಿ ಕಥೆ, ಕವಿತೆ, ಕಾದಂಬರಿ, ನಾಟಕ ಮುಂತಾದ ಅನೇಕ ಸಾಹಿತ್ಯ ಭಾಗಗಳನ್ನು ಸೃಷ್ಟಿಸಲು ಆವಶ್ಯಕ ಸಾಮಗ್ರಿಗಳನ್ನು ಕಂಡುಹಿಡಿಯುವುದು ಕಷ್ಟವಾಗಲಾರದು. ಹಾಗೆ ಉದ್ದೇಶಪಟ್ಟು ಮಾಡಿದ ಪ್ರಯತ್ನದ ಫಲವಾಗಿ ಈ ಚಿಕ್ಕ ಪುಸ್ತಕವು ಯಥಾಮತಿ ರಚನೆಗೊಳ್ಳಲು ಸಾಧ್ಯವಾಯಿತು.

ನಮ್ಮ ದೇಶದಲ್ಲಿ ರಾಮಾಯಣ ಗ್ರಂಥಗಳು ಅನೇಕವಾಗಿವೆಯಷ್ಟೆ! ವಾಲ್ಮೀಕಿ ರಾಮಾಯಣ, ವಾಸಿಷ್ಠ ರಾಮಾಯಣ, ಅಧ್ಯಾತ್ಮ ರಾಮಾಯಣ, ಆನಂದ ರಾಮಾಯಣ ಮುಂತಾಗಿ ನಾನಾ ಭಾಷೆಗಳಲ್ಲಿ ರಚಿತವಾಗಿರುವ ಎಲ್ಲಾ ರಾಮಾಯಣಗಳಲ್ಲಿಯೂ ಶ್ರೀರಾಮನ ಕಾರ್ಯಗಳೇ, ಆತನ ಅವತಾರ ಮಹಿಮೆಗಳೇ, ವಿಶೇಷವಾಗಿ ವರ್ಣಿತವಾಗಿವೆ. ಆದರೆ ಶ್ರೀರಾಮನು ತನ್ನ ಆ ಅವತಾರ ಕಾರ್ಯವನ್ನು ಕೈಕೊಳ್ಳಲೂ ಅದನ್ನು ಸಾಂಗವಾಗಿಸಲೂ ಯಾವ ಶಕ್ತಿಯು ಹಿನ್ನೆಲೆಯಾಗಿತ್ತೆಂದು ಗಮನಿಸುವುದು ಆವಶ್ಯಕವಲ್ಲವೆ? ಅದನ್ನು ಗಮನಿಸಬೇಕಾದ ಆವಶ್ಯಕತೆಯನ್ನು ಕುರಿತು ಯೋಚಿಸಿದ ಕವಿಶ್ರೇಷ್ಠನೊಬ್ಬನು ಅದ್ಭುತ ರಾಮಾಯಣವನ್ನು ರಚಿಸಿದನು. ಅದರಲ್ಲಿ ಆ ಮಹನೀಯನು ಸೀತಾದೇವಿಯ ಮಾಹಾತ್ಮ್ಯವನ್ನೂ ಶಕ್ತಿವಿಶೇಷವನ್ನೂ ಅನೋಘವಾಗಿ ಕೊಂಡಾಡಿರುವನು.

ನಮ್ಮಲ್ಲಿ ಯಾವ ದೇಶದ ಚರಿತ್ರೆಯನ್ನು ಬರೆದರೂ ಆ ದೇಶದಲ್ಲಿ ಪ್ರಖ್ಯಾತರಾದ ರಾಜರ ಚರಿತ್ರೆಯನ್ನು ರಚಿಸುವುದೇ ಹೆಚ್ಚಾಗಿ ಕಂಡುಬರುತ್ತಿದೆ. ಸೂಕ್ಷ್ಮವಾಗಿ ವಿಚಾರಿಸಿದಲ್ಲಿ ಅಂತಹ ಆ ರಾಜರುಗಳ ಪ್ರಖ್ಯಾತಿಗೂ ಆಯಾ ದೇಶಗಳ ಹಲವು ವಿಚಿತ್ರ ಚಾರಿತ್ರಾಂಶಗಳ ಉತ್ಪತ್ತಿಗೂ ಒಬ್ಬರಿಬ್ಬರೋ ಅಥವಾ ಕೆಲವು ಮಂದಿಯೋ ಸ್ತ್ರೀಯರು ಕಾರಣಕರ್ತರಾಗಿರುವುದು ತಪ್ಪದೆ ಕಂಡುಬರುತ್ತದೆ. ದೇಶಚರಿತ್ರೆಯ ನಿರ್ಮಾಣದಲ್ಲಿ ಈ ವಿಚಾರವನ್ನು ಮಾನಸಿಕ ಮಾಡುವುದು ಯುಕ್ತವಲ್ಲ. ಪ್ರಪಂಚ ವ್ಯಾಪಾರವು, ಹೆಂಗಸರು ಮತ್ತು ಗಂಡಸರು ಇಬ್ಬರಿಂದಲೂ ಸೇರಿ ನಡೆದಿದೆಯಲ್ಲವೆ, ಒಂದೇ ಕೈಯಿಂದ ಹೇಗೆ ಚಪ್ಪಾಳೆ ಆಗಲಾರದೋ, ಹಾಗೆ ಒಬ್ಬರಿಂದಲೇ ನಡೆದಿರಲಾರದು.

ನಮ್ಮ ಈ ಮೈಸೂರು ದೇಶದ ಚರಿತ್ರೆಯಲ್ಲಂತೂ, ಕೆಲವು ಮಂದಿ ಸ್ತ್ರೀಶಿರೋಮಣಿಯರು ಬಹು ಮಹತ್ವದ ಭಾಗ ವಹಿಸಿರುವುದು ಕಂಡುಬರುತ್ತಿದೆ. ದೇಶಕ್ಕೆ ಪ್ರಬಲ ಗಂಡಾಂತರಗಳೊದಗಿ, ರಾಜವಂಶವು ಸಿಂಹಾಸನದ ಸ್ವಾತಂತ್ರ್ಯವನ್ನು ಕಳೆದುಕೊಂಡು ನಾಮಾವಶೇಷವಾಗುವುದೋ ಎಂಬಂತಹ ಸಂದರ್ಭಗಳು ಒದಗಿದ್ದಾಗ, ಅವನ್ನು ಕಾಪಾಡಿದವರು ಈ ಮಹಿಳಾಮಣಿಯರೇ! ರಾಜವಂಶಕ್ಕೆ ಹೇಳಲಾಗದ ಕಷ್ಟಸಂಕಟಗಳು

ಓದಗಿ, ಅದು ಬದುಕಿ ಬಾಳುವುದೇ ಕಷ್ಟವೆನ್ನಿಸಿದ್ದಾಗ್ಗೆ ಅದಕ್ಕೆ ಪ್ರಾಣದಾನ ಮಾಡಿದವರು ಈ ಸ್ತ್ರೀ ಶಿರೋಮಣಿಗಳೇ! ರಾಜಕಾರ್ಯ ನಿಪುಣರೂ ಧೈರ್ಯ ಶೌರ್ಯ ಪರಾಕ್ರಮ ಸಂಪನ್ನರೂ ಆದ ಪುರುಷರೇ ಕಂಗೆಟ್ಟು ಕುಳ್ಳಿರಬೇಕಾದಂತಹ ಕಠಿನ ಸಂದರ್ಭಗಳಲ್ಲೂ ಎದೆಗೆಡದೆ ತಮ್ಮ ಕಾರ್ಯಪ್ರಯತ್ನವನ್ನು ಮುಂದುವರಿಸಿ ಕಾರ್ಯಸಾಧನೆಮಾಡಿ ದೇಶ ಸ್ವಾತಂತ್ರ್ಯವನ್ನು ರಾಜವಂಶಕ್ಕೆ ದಕ್ಕಿಸಿಕೊಂಡ ಕೀರ್ತಿ ಈ ಸಾಧ್ವಿಯರ ಪಾಲಿಗೇ ಸಲ್ಲುತ್ತದೆ.

ಹದಿನಾಲ್ಕನೆಯ ಶತಮಾನದಲ್ಲಿ (ಕ್ರಿ. ಶ. ೧೪೯೯ರಲ್ಲಿ) ಮೈಸೂರಿನ ಚಾಮರಾಜರು ಮೃತರಾಗಿ ರಾಜ್ಯಕ್ಕೆ ಗಂಡು ದಿಕ್ಕಿಲ್ಲದೆ ಕ್ರೂರ ಮಾರನಾಯಕನ ಬಾಧೆಯಿಂದ ಸಿಂಹಾಸನವು ರಾಜವಂಶಕ್ಕೆ ಕೈತಪ್ಪಿ ಹೋಗಬಹುದೆಂಬ ಭೀತಿಯುಂಟಾಗಿದ್ದಾಗ ತಮ್ಮ ಧೈರ್ಯ ಸ್ಥೈರ್ಯಗಳೂ, ದೂರಾಲೋಚನೆ, ಸಮಯಸ್ಫೂರ್ತಿ, ಉಪಾಯ ಕುಶಲತೆ, ಮುಂತಾದುವುಗಳಿಂದ ಅದನ್ನು ಕಾಪಾಡಿದವರು ಶ್ರೀ ದೇವಾಜಮ್ಮಣ್ಣಿಯವರು. ತರುವಾಯ ಸರಿಯಾಗಿ ನಾಲ್ಕು ಶತಮಾನಗಳಿಗೆ (ಕ್ರಿ. ಶ. ೧೭೯೯) ಹೈದರಾಲಿ ಟಿಪ್ಪುಸುಲ್ತಾನರ ಪ್ರಾಬಲ್ಯದಿಂದ ಸಿಂಹಾಸನವು ರಾಜಮನೆತನದ ಸ್ವಾಧೀನ ತಪ್ಪಿಹೋಗುವಂತಹ ಅಪಾಯ ಮೊದಗಿದ್ದಾಗ, ಬಾಯಿಂದ ಹೇಳಲಾಗದ, ಅನುಭವಿಸಲಸಾಧ್ಯವಾದ, ಹಲವು ಕಷ್ಟ ದುಃಖ ಸಂಕಟಗಳ ಪಾಲಾದರೂ ಧೈರ್ಯಗೆಡದೆ ಅನೇಕ ಪ್ರಯತ್ನಗಳನ್ನು ನಡೆಯಿಸಿ, ಇಂಗ್ಲೀಷರ ಸಹಾಯ ಪಡೆದು, ಆಡಳಿತ ಸ್ವಾತಂತ್ರ್ಯವನ್ನು ಪುನಃ ರಾಜವಂಶಕ್ಕೆ ದಕ್ಕಿಸಿಕೊಂಡವರು ಪ್ರಾತಃಸ್ಮರಣೀಯರಾದ ಮಹಾಮಾತೃಶ್ರೀ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು. ಮುಂದೆ ಕಂಪನಿಯ ಸರ್ಕಾರಕ್ಕೆ ಐವತ್ತು ವರ್ಷಕಾಲ ಸೇರಿಹೋಗಿದ್ದ ರಾಜ್ಯದ ಆಡಳಿತವನ್ನು ತಮ್ಮ ಪುಣ್ಯೋದಯದಿಂದ ಪಡೆದು, ತಾರುಣ್ಯದಲ್ಲೇ ಪತಿ ವಿಯೋಗವಾದರೂ ಧೃತಿಗೆಡದೆ, ರೀಜಂಟರಾಗಿ ಎಂಟು ವರ್ಷಕಾಲ ಉತ್ತಮ ರೀತಿಯಿಂದ ರಾಜ್ಯಭಾರ ಮಾಡಿ ಕೀರ್ತಿಸಂಪನ್ನರಾದವರು, ಶ್ರೀ ಚಾಮರಾಜೇಂದ್ರರ ಧರ್ಮಪತ್ನಿ ಶ್ರೀ ವಾಣೀವಿಲಾಸ ಸನ್ನಿಧಾನಂಗಳವರಾದ ಮಹಾರಾಣಿ ಕೆಂಪನಂಜಮ್ಮಣ್ಣಿಯವರು. ಈ ಮಹಾರಾಣಿಯವರು, ರಾಜರು ಇನ್ನೂ ಬಾಲಕರೆಂಬ ಕಾರಣದಿಂದ ಆಡಳಿತವು ಪುನಃ ಕೈತಪ್ಪಿ ಹೋಗದಂತೆ ಉಳಿಸಿದುದು ಮಾತ್ರವಲ್ಲ, ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರರೆಂಬ ದಿವ್ಯ ಜೀವರತ್ನವನ್ನು, ರಾಜಚೂಡಾಮಣಿಯನ್ನು,-ಮೈಸೂರು ದೇಶಕ್ಕೆ ಪ್ರಸಾದಿಸಿ ಮಹೋಪಕಾರಮಾಡಿದ್ದಾರೆ. ಮೈಸೂರು ರಾಜವಂಶಕ್ಕೆ ಹೀಗೆ ಮಹೋಪಕಾರ ಮಾಡಿ ಕೀರ್ತಿ ಶರೀರಿಗಳಾಗಿರುವ ಈ ಮೂವರು ಮಹಿಳಾಮಣಿಯರನ್ನೂ ನಾವು ರಾಜ್ಯಲಕ್ಷ್ಮಿಯರೆಂದು ಗೌರವಿಸಿ ಅವರ ನಾಮಧೇಯಗಳನ್ನು ದೇಶಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವುದು ನಮ್ಮ ಕರ್ತವ್ಯವಲ್ಲವೆ? ಈ ಕರ್ತವ್ಯಸಾಧನೆಯಲ್ಲಿ, ನಮ್ಮನ್ನಾಳುವ ರಾಜವಂಶಕ್ಕೆ ನನ್ನದಿದು ಅಳಿಲು ಭಕ್ತಿಯ ಮಳಲ ಸೇವೆ.

ಮೈಸೂರು ರಾಜಮನೆತನವನ್ನು ಮಹದಪಾಯಕರ ಸಂದರ್ಭಗಳಲ್ಲಿ ರಾಜವಂಶದ ಕುಲದೇವತೆ ಶ್ರೀ ಚಾಮುಂಡಾಂಬಿಕೆಯು ಕೇವಲ ಅಭಿಮಾನದಿಂದಲೋ ಎಂಬಂತೆ

ಕಾಪಾಡುತ್ತ ಬಂದಿರುವ ವಿಚಾರವು ಪರಮಾಶ್ಚರ್ಯಕರವಾಗಿದೆ. ಹದಿನಾಲ್ಕನೆಯ ಶತಮಾನದಲ್ಲಿ ಶ್ರೀ ಯದುರಾಯರ ಆಗಮನವಾಗಿ, ಅವರು ಮಾರನಾಯಕನನ್ನು ವಧಿಸಿ, ಮತ್ತೆ ರಾಜವಂಶವನ್ನು ಪ್ರತಿಷ್ಠಿಸಿದಾಗ ನಡೆದ ಕಥಾಸಂದರ್ಭವಂತೂ, ಕಾದಂಬರಿಯಂತೆ ಆಶ್ಚರ್ಯಕರವಾಗಿ ಪರಿಣಮಿಸುತ್ತದೆ. ಉಭಯರಿಗೂ ಕನಸುಗಳಾಗುವುದು, ಆ ಕನಸುಗಳು ಪ್ರತ್ಯಕ್ಷ ನಡೆದ ಮಾತುಕಥೆಗಳೋ ಎಂಬಂತೆ ಒಡನೆಯೇ ನಿದರ್ಶನಕ್ಕೆ ಬರುತ್ತಿರುವುದು, ಇವೇ ಮುಂತಾದ ವಿಚಾರಗಳು ಚರಿತ್ರೆಯ ಸರಹದ್ದನ್ನು ಮೀರಿ ಕಟ್ಟುಕಥೆಯ ಅಥವಾ ಕಾದಂಬರಿಯ ಎಲ್ಲೆಗೆ ಮುಟ್ಟುವಂತಿವೆ. ಆದರೂ ಅವು ಚಾರಿತ್ರಿಕ ಸಂಗತಿಗಳೆಂಬುದು ನಿರ್ವಿವಾದ. ಇದರಿಂದ ಮೈಸೂರು ರಾಜವಂಶದ ಪರಿಪಾಲನೆಯಲ್ಲಿ ಸಹಾಯಕ ದೈವಿಕಹಸ್ತವು ಅವ್ಯಕ್ತವಾಗಿದ್ದರೂ ಎಷ್ಟು ಮಟ್ಟಿಗೆ ವ್ಯಕ್ತವಾಗಿ ಕಂಡುಬರುತ್ತಿದೆ ಎಂಬುದನ್ನು ಪ್ರತ್ಯಕ್ಷ ಕಾಣಬಹುದಾಗಿದೆ. ಇದು ಮಹತ್ತ್ವದ ಸಂಭವವಲ್ಲವೆ?

ಒಂದು ದೇಶಪಾಲನೆಯಲ್ಲಿ ಎಲ್ಲಾ ಕಾಲದಲ್ಲೂ ಒಂದೇ ಬಗೆಯ ಸನ್ನಿವೇಶಗಳಿರುವುದಿಲ್ಲ. ಕಾಲಾನುಸಾರವಾಗಿ ಹಲವು ವಿಚಿತ್ರ ಸನ್ನಿವೇಶಗಳು ಒದಗುತ್ತವೆ. ದೇಶವೇ, ದೇಶ ಸ್ವಾತಂತ್ರ್ಯವೇ, ಕೈತಪ್ಪಿ ಹೋಗುವಂತೆ ಇದ್ದಾಗ್ಗೆ ಅದನ್ನು ಉಳಿಸಿಕೊಳ್ಳುವುದು ಅವಶ್ಯಕವೆನ್ನಿಸಿದ್ದರೆ, ಉಳಿಸಿಕೊಂಡ ತರುವಾಯ ಅದನ್ನು ವ್ಯವಸ್ಥೆಗೊಳಿಸುವುದೂ, ವ್ಯವಸ್ಥೆಗೊಂಡ ತರುವಾಯ ವಿವಿಧ ಮಾರ್ಗಗಳಿಂದ ಅದನ್ನು ಅಭಿವೃದ್ಧಿಗೊಳಿಸುವುದೂ, ಅವಶ್ಯಕ ಕಾರ್ಯಗಳಾಗುತ್ತವೆ. ರಾಜ್ಯಭಾರವು ವ್ಯವಸ್ಥೆಗೊಂಡಿರುವ ಈ ಕಾಲದಲ್ಲಿ, ಅದನ್ನು ದೇಶ ವಿದೇಶಗಳೊಂದಿಗೆ ಪ್ರಗತಿ ಮಾರ್ಗದಲ್ಲಿ ಸರಿಗಟ್ಟಿ ನಡೆವಂತೆ ಆಳಿಕೊಂಡಿರಬೇಕಾದುದು ಅತ್ಯಾವಶ್ಯಕ. ಈ ಮಹಾಕಾರ್ಯವು ಮೈಸೂರು ರಾಜವಂಶದ ಇಂದಿನ ರಾಜ್ಯಲಕ್ಷ್ಮಿಯರ ಆಶೀರ್ವಾದ, ಪ್ರೇರಣೆ, ಅನುಮೋದನೆ ಮತ್ತು ಬೆಂಬಲ ಸಹಾನುಭೂತಿಗಳನ್ನು ಗಳಿಸಿಕೊಂಡಿರುವ ಶ್ರೀಮಜ್ಜಯಚಾಮರಾಜ ಒಡೆಯರವರ ಶುಭ ಹಸ್ತದಿಂದ ಮುಂದುವರಿಯಲು ಕಾದಿದೆ. ಜಗನ್ಮಾತೆ ಶ್ರೀ ಚಾಮುಂಡಾಂಬಿಕೆಯು ಕೃಪಾವರ್ಷವನ್ನು ಸುರಿಸುತ್ತ ತನ್ನ ಅಭಯ ಹಸ್ತವನ್ನು ನೀಡುತ್ತ ದೇಶವನ್ನು ಕಾಪಾಡುತ್ತಿರುವಳೆಂಬುದಂತೂ ಸ್ಪಷ್ಟವಾಗಿದೆಯಲ್ಲವೆ?

ನಮ್ಮನ್ನಾಳುವ ಮೈಸೂರು ರಾಜವಂಶಕ್ಕೆ ಸಂಬಂಧಿಸಿದ ಈ ಸ್ತ್ರೀ ಶಿರೋಮಣಿಯರ ಅಮೋಘ ಕಾರ್ಯಗಳ ಈ ಚಾರಿತ್ರಿಕ ಕಥೆಯನ್ನು ರಚಿಸಿ ರಾಜವಂಶದವರ ಮತ್ತು ಮಹಾಜನರ ಸೇವೆಗಾಗಿ ಅರ್ಪಿಸಬೇಕೆಂದು ಬಹು ದಿನಗಳಿಂದ ಇದ್ದ ನನ್ನ ಅಭಿಲಾಷೆಯು ಈ ಚಿಕ್ಕ ಪುಸ್ತಕರೂಪದಲ್ಲಿ ಯಥಾಮತಿ ಈಡೇರಿದಂತಾಗಿದೆ. ಇದರ ರಚನೆಯಲ್ಲಿ ಯೋಗ್ಯ ಸಲಹೆಗಳನ್ನು ಕೊಟ್ಟು ಉಪಕರಿಸಿದ ನನ್ನ ಮಿತ್ರರೆಲ್ಲರಿಗೂ ಈ ಮೂಲಕ ನನ್ನ ವಂದನೆಗಳನ್ನರ್ಪಿಸುತ್ತೇನೆ. ಇದಕ್ಕೆ ತಮ್ಮ ಅಮೂಲ್ಯವಾದ ವೇಳೆಯನ್ನು ವಿನಿಯೋಗಿಸಿ ದಯಮಾಡಿ ಮುನ್ನುಡಿಯನ್ನು ಬರೆದುಕೊಟ್ಟು, ಉಪಕಾರಮಾಡಿದ ಕರ್ಣಾಟಕ ಭಾಷಾ

ಸೇವೆಯಲ್ಲಿ ಶ್ರದ್ಧಾಳುಗಳಾದ, ರಾಜಸೇವಾಸಕ್ತ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ. ಅವರಿಗೆ ನನ್ನ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ.

ಸ್ವಲ್ಪವಾಗಿ ದೊರೆತ ಚರಿತ್ರಾಂಶವನ್ನು ಅವಲಂಬಿಸಿ, ಆಯಾ ಸಂದರ್ಭ ಸನ್ನಿವೇಶಗಳಲ್ಲಿ ನಡೆದಿರಬಹುದಾದ ಸ್ವಾಭಾವಿಕ ವಿಚಾರಗಳನ್ನು ಲಕ್ಷ್ಯಕ್ಕೆ ತಂದುಕೊಂಡು ಈ ಕಥಾಭಾಗವನ್ನು ರಚಿಸಲಾಗಿದೆ. ಈ ಗ್ರಂಥರಚನೆಗೆ ಮೈಸೂರು ಮಹಾರಾಜರ ವಂಶಾವಳಿ, ವಂಶ ರತ್ನಾಕರ, ಅಬಲಾ ಸಚ್ಚರಿತ್ರ ರತ್ನಮಾಲಾ (ಆಂಧ್ರ), Modern Mysore, ಯದುನೃಪ ವಿಜಯ ಮುಂತಾದ ಹಲವು ಗ್ರಂಥಗಳ ಸಹಾಯವನ್ನು ಪಡೆದಿರುತ್ತೇನೆ. ಅದಕ್ಕಾಗಿ ಆಯಾ ಗ್ರಂಥಕರ್ತರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಮರ್ಪಿಸುತ್ತೇನೆ.

ಬೆಂಗಳೂರು
೧೧-೮-೧೯೪೦. ಕಾರ್ತೀಕ ಶು. ೧
ವಿಕ್ರಮ ಸಂ.

ಸುಜನ ವಿಧೇಯ
**ಯಂ. ರಾಮರಾವ್**
ಸಂಪಾದಕ 'ಸುಬೋಧ'

---

## ತಿದ್ದಿದ ದ್ವಿತೀಯ ಮುದ್ರಣ

"ಮೈಸೂರಿನ ರಾಜ್ಯಲಕ್ಷ್ಮಿಯರು" ಎಂಬೀ ಗ್ರಂಥವನ್ನು ತಮ್ಮ ಮಹಾ ಸನ್ನಿಧಾನಕ್ಕೆ ಅಂಕಿತಗೊಳಿಸಿ ಪ್ರಕಟಿಸಬಹುದೆಂದು ಮಹದನುಜ್ಞೆಯನ್ನು ದಯಪಾಲಿಸಿದ ಶ್ರೀ ಲಕ್ಷ್ಮೀ ವಿಲಾಸ ಸನ್ನಿಧಾನದ ಶ್ರೀಮನ್ಮಹಾರಾಣಿಯವರ ಪರಮಾನುಗ್ರಹ ವಿಶೇಷವೇ ಗ್ರಂಥವು ಇಷ್ಟು ಶೀಘ್ರವಾಗಿ ದ್ವಿತೀಯ ಮುದ್ರಣದ ಬೆಳಕನ್ನು ಕಾಣಲು ಸಾಧ್ಯವಾಯಿತಾದುದರಿಂದ ಶ್ರೀಮನ್ಮಹಾರಾಣಿಯವರ ದಿವ್ಯ ಸನ್ನಿಧಾನಕ್ಕೂ, ಈ ಚಿಕ್ಕ ಗ್ರಂಥವನ್ನು ವಿಶೇಷ ಕೃಪೆಯಿಟ್ಟು ಒಪ್ಪಿಸಿಕೊಂಡು ಪ್ರೋತ್ಸಾಹಿಸಿದ ಶ್ರೀಮನ್ಮಹಾರಾಜಾ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರ ಪ್ರಭು ಸನ್ನಿಧಾನಕ್ಕೂ ರಾಜಭಕ್ತಿಯುತವಾದ ನನ್ನ ವಂದನೆಗಳನ್ನು ವಿನಯಪೂರ್ವಕವಾಗಿ ಸಮರ್ಪಿಸುತ್ತೇನೆ.

ಈ ಗ್ರಂಥದ ಮೊದಲನೆಯ ಮುದ್ರಣಕ್ಕೆ ಮುನ್ನುಡಿಯನ್ನು ಬರೆದುಕೊಟ್ಟು ಮಹೋಪಕಾರಮಾಡಿದ ಪೂಜ್ಯರಾದ ರಾಜಸೇವಾಸಕ್ತ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಆ ಮುನ್ನುಡಿಯ ಕೊನೆಯ ಭಾಗದಲ್ಲಿ ಸೂಚಿಸಿದ ಅಭಿಪ್ರಾಯವನ್ನು ಸಾರ್ಥಕಗೊಳಿಸಲೋ ಎಂಬಂತೆ, ಮೈಸೂರು ಸರ್ಕಾರದ ವಿದ್ಯಾಭ್ಯಾಸದ ಇಲಾಖಾ ಡೈರೆಕ್ಟರು ಸಾಹೇಬರವರ ಆಜ್ಞೆಯನ್ನನುಸರಿಸಿ ಮಾನ್ಯ ಟೆಕ್ಸ್ಟ್ ಬುಕ್ ಕಮಿಟಿಯವರು, ಇದನು ೧೯೪೩-೪೪ನೆಯ ವರ್ಷದ ಮೈಸೂರು ಸಂಸ್ಥಾನದ ಮಿಡ್ ಸ್ಕೂಲ್ ಪರೀಕ್ಷೆಗೆ

ಪಠ್ಯ ಪುಸ್ತಕವನ್ನಾಗಿ ನಿಯಮಿಸಿ, ಈ ಎರಡನೆಯ ಮುದ್ರಣಕ್ಕೆ ಅವಕಾಶವನ್ನು ಕಲ್ಪಿಸಿ ಕೊಟ್ಟುದಕ್ಕಾಗಿ ಮೇಲ್ಕಂಡ ಸಂಸ್ಥೆಯವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುವುದು ನನ್ನ ಕರ್ತವ್ಯವಾಗಿದೆ. ಈ ಮೂಲಕ ನಮ್ಮ ಸಂಸ್ಥಾನದ ಸಕಲ ಭಾಗಗಳಲ್ಲೂ ವಾಸಿಸುತ್ತಿರುವ ಹತ್ತಾರು ಸಹಸ್ರಮಂದಿ ಬಾಲಕ ಬಾಲಿಕೆಯರೂ, ಜನ ಸಾಮಾನ್ಯರೂ ನಮ್ಮ ಪವಿತ್ರ ರಾಜವಂಶದ ಈ ಚರಿತ್ರೆಯನ್ನು ಓದಿ ರಾಜಭಕ್ತಿ ದೇಶಭಕ್ತಿಗಳ ಪ್ರಥಮ ಪಾಠಗಳ ಪರಿಚಯಗೊಳ್ಳುವಂತಾದುದು ಬಹು ಹರ್ಷದಾಯಕ ಸಂಗತಿ.

'ಪಠ್ಯ ಪುಸ್ತಕ'ಕ್ಕಾಗಿ ತಿದ್ದಿ ಪ್ರಕಟಿಸಬೇಕಾದ ಆವಶ್ಯಕತೆಯೊದಗಿದುದರಿಂದ ಮಾನ್ಯ ಟೆಕ್ಸ್ಟ್ ಬುಕ್ ಕಮಿಟಿಯವರ ಸಲಹೆ ಸೂಚನೆಗಳನ್ನೂ, ವಿದ್ವಾಂಸರಾದ ಇತರ ಅನೇಕ ಮಂದಿ ಮಹನೀಯರ ಸೂಚನೆಗಳನ್ನೂ ಅನುಸರಿಸಿ ಈ ಪುಸ್ತಕವನ್ನು ಸಮಗ್ರವಾಗಿ ಪರಿಶೋಧಿಸಿ ಮುದ್ರಣಗೊಳಿಸಲಾಗಿದೆ. ಮೊದಲ ಮುದ್ರಣದಲ್ಲಿ ದೊರಕಿಸಲಾಗದಿದ್ದ ಕೆಲವು ಅಮೂಲ್ಯ ಚಿತ್ರಪಟಗಳನ್ನೂ ಸಂಗ್ರಹಿಸಿ ಇದರಲ್ಲಿ ಸೇರಿಸಲಾಗಿದೆ. ಒಟ್ಟಿನಲ್ಲಿ ನಮ್ಮನ್ನಾಳುವ ರಾಜವಂಶದ ಪವಿತ್ರ ಚರಿತ್ರೆಯನ್ನೊಳಗೊಂಡ ಈ ಗ್ರಂಥವನ್ನು ಆದಷ್ಟೂ ಉತ್ತಮ ರೀತಿಯಲ್ಲಿ ಸಿದ್ಧಗೊಳಿಸಿ ಬಾಲಕ ಬಾಲಿಕೆಯರ ಹಸ್ತಗಳಲ್ಲಿಡಬೇಕೆಂಬ ಬಯಕೆಯಿಂದ ಸಾಧ್ಯವಿದ್ದ ಸರ್ವಪ್ರಯತ್ನವನ್ನೂ ಮಾಡಲಾಗಿದೆ.

ಪ್ರಪಂಚವನ್ನೇ ವ್ಯಾಪಿಸಿರುವ ದಾರುಣವಾದ ಯುದ್ಧದ ಕಾರಣದಿಂದ ಅಪರಿಮಿತವಾಗಿ ಹೆಚ್ಚಿಹೋಗಿರುವ ಕಾಗದ ಶಾಯಿ ಮುಂತಾದ ಮುದ್ರಣ ಸಾಮಗ್ರಿಗಳ ಬೆಲೆಯ ದೆಸೆಯಿಂದ ಅಸಾಧ್ಯವೆನ್ನಿಸಿದ್ದ ಈ ಪುನರ್ಮುದ್ರಣ ಕಾರ್ಯಕ್ಕೆ ಸಕಲ ವಿಧ ಅನುಕೂಲತೆಗಳನ್ನೂ ಒದಗಿಸಿಕೊಟ್ಟು ಸಹಾಯಮಾಡಿದ ಮಾನ್ಯಮಿತ್ರರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ. ಈ ಪುಸ್ತಕಕ್ಕೆ ಆವಶ್ಯಕವಾದಷ್ಟು ಕಾಗದವನ್ನೂ, ಚಿತ್ರಪಟಗಳ ಮುದ್ರಣಕ್ಕೆ ಬೇಕಾದ ಉತ್ತಮ ತರಗತಿಯ ಕಾಗದವನ್ನೂ ಒಡನೆ ಒದಗಿಸಿಕೊಟ್ಟು ಸಹಾಯಮಾಡಿದ 'ಬೆಂಗಳೂರಿನ ಮೈಸೂರು ಪೇಪರ್ ಮಿಲ್ಸ್ ಕಂಪೆನಿ' ಕಚೇರಿಯ ಅಧಿಕಾರಿ ವರ್ಗಕ್ಕೆ ಕೃತಜ್ಞನಾಗಿದ್ದೇನೆ.

ಬೆಂಗಳೂರು,<br>ತಾ॥ ೧-೩-೧೯೪೨.

ಇತಿ ಸುಜನ ವಿಧೇಯ

# ಅನುಕ್ರಮಣಿಕೆ


| | | |
|---|---|---|
| | ಮುನ್ನುಡಿ | i |
| | ಲೇಖಕನ ನಾಲ್ಕು ಮಾತು | iii |
| | ತಿದ್ದಿದ ದ್ವಿತೀಯ ಮುದ್ರಣ | vi |
| ೧ | ಮುಂಬೆಳಗಿನ ಕನಸು | ೧ |
| ೨ | ವಿಂಧ್ಯಗಿರಿ ಶಿಖರದಿಂದ ಮಹಾಬಲಾದ್ರಿಗೆ | ೧೩ |
| ೩ | ಭೈರವಾಲಯದಲ್ಲಿ | ೨೧ |
| ೪ | ರಾಜಪತ್ನಿಯ ಸಂದೇಶ | ೨೮ |
| ೫ | ವಿಜಯ ತಾಂಬೂಲ | ೩೩ |
| ೬ | ನೃತ್ಯ ನಾಟ್ಯ | ೪೧ |
| ೭ | ವಿಜಯೋತ್ಸವ | ೬೦ |
| ೮ | ವಿವಾಹ ಮಹೋತ್ಸವ, ಪಟ್ಟಾಭಿಷೇಕ | ೭೦ |
| ೯ | ನೂತನ ರಾಜದಂಪತಿಗಳು | ೮೨ |
| ೧೦ | ಹೈದರಾಲಿಯ ಸರ್ವಾಧಿಕಾರ | ೯೦ |
| ೧೧ | ಮೈಸೂರಿನ ಭಾಗ್ಯದೇವತೆ | ೧೦೧ |
| ೧೨ | ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರು | ೧೦೬ |
| | ಹಿನ್ನುಡಿ | ೧೧೫ |
| | ಶ್ರೀಮನ್ಮಹಾರಾಜರವರ ಶ್ರೇಯಃಪ್ರಾರ್ಥನೆ | ೧೧೮ |






ಆಳುವ ಮಹಾಸ್ವಾಮಿಯವರು.



ಶ್ರೀಚಾಮುಂಡೇಶ್ವರೀ ಅಮ್ಮನವರು.

# ಮೈಸೂರಿನ ರಾಜ್ಯಲಕ್ಷ್ಮಿಯರು

## ೧. ಮುಂಬೆಳಗಿನ ಕನಸು

ಶ್ರೀ ಚಾಮುಂಡಾಂಬಿಕೆಯ ಕೃಪೆಗೆ ಪಾತ್ರವಾಗಿ ನಮ್ಮ ಈ ಮೈಸೂರು ಸಂಸ್ಥಾನದ ರತ್ನ ಸಿಂಹಾಸನವನ್ನು ಏರಿ ಆಳುತ್ತಿರುವ ರಾಜವಂಶವು ಬಹು ಪುರಾತನವಾದುದು. ಇದನ್ನು ಈಗ್ಗೆ ಸುಮಾರು ಐದುನೂರು ವರ್ಷಗಳಿಗೆ ಹಿಂದೆ ಭೋಜವಂಶಕ್ಕೆ ಸೇರಿದ ಅರಸರು ಪಾಲಿಸುತ್ತಿದ್ದರು. ಆಗ ದೇಶವು ಈಗಿನಂತೆ ಒಂದು ವ್ಯವಸ್ಥೆಗೊಂಡ ರಾಜ್ಯಭಾರಕ್ಕೆ ಒಳಪಟ್ಟು ಇರಲಿಲ್ಲ. ದೇಶದಲ್ಲಿ ಎಲ್ಲೆಲ್ಲೂ ಸಣ್ಣ ಸಣ್ಣ ಪಾಳೆಯಪಟ್ಟುಗಳು; ಅವುಗಳನ್ನು, ಚಿಕ್ಕ ಚಿಕ್ಕ ಪಾಳೆಯಗಾರರು ಯಾರ ಅಂಕಗೂ ಒಳಪಡದೆ, ತಮ್ಮ ಮನಸ್ಸಿಗೆ ಬಂದಂತೆ ಆಳುತ್ತಿದ್ದರು. ಅಂತಹ ಪಾಳೆಯಪಟ್ಟುಗಳಲ್ಲಿ ಈಗಿನ ಮೈಸೂರು ನಗರವಿರುವ ಭಾಗವು ಮುಖ್ಯವಾದುದಾಗಿತ್ತು. ಅದನ್ನು ಹದಿನಾಲ್ಕನೆಯ ಶತಮಾನದ ಕೊನೆಯ ಭಾಗದಲ್ಲಿ ಚಾಮರಾಜನೆಂಬ ಅರಸು ಧರ್ಮದಿಂದ ಪಾಲಿಸುತ್ತಿದ್ದನು.

ದೈವಭಕ್ತನೂ ದಯಾಶಾಲಿಯೂ ಆದ ಚಾಮರಾಜನ ಆಳ್ವಿಕೆಗೆ ಒಳಪಟ್ಟಿದ್ದ ಆ ನಾಡು, ಇತರ ಪಾಳೆಯಪಟ್ಟುಗಳಂತಲ್ಲದೆ ಬಹು ಉತ್ತಮ ಸ್ಥಿತಿಯಲ್ಲಿತ್ತು. ಇತರ ಪಾಳೆಯಗಾರರು ಪ್ರಜೆಗಳನ್ನು ಪೀಡಿಸಿ ಹಿಂಸಿಸಿ ಧನಧಾನ್ಯಗಳನ್ನು ಗಳಿಸಿ, ಯಾರ ಲಕ್ಷ್ಯವೂ ಇಲ್ಲದೆ, ತಮ್ಮ ಸುಖವನ್ನು ಹೆಚ್ಚಿಸಿಕೊಂಡು ಮೆರೆಯುತ್ತಿದ್ದಾಗ ಮೈಸೂರಿನ ಪ್ರಭು ಚಾಮರಾಜನು ಚಾಮುಂಡಾಂಬಿಕೆಗೆ ಭಕ್ತನಾಗಿ, ಪ್ರಜೆಗಳನ್ನು ಪ್ರೀತಿ ವಿಶ್ವಾಸಗಳಿಂದ ಕಾಪಾಡುತ್ತ, ತಾನು ಮಾಡುತ್ತಿದ್ದ ರಾಜ್ಯದ ಆಡಳಿತವು ಆ ಲೋಕ ಮಾತೆಯ ಸೇವೆಯೆಂದೇ ಭಾವಿಸಿದ್ದನು. ಪ್ರಜೆಗಳಿಗೆ ಬೇಕಾದ ಅನುಕೂಲತೆ ಗಳನ್ನೆಲ್ಲ ಒದಗಿಸಿಕೊಟ್ಟು ಧರ್ಮಪ್ರಭು ಎನ್ನಿಸಿಕೊಂಡಿದ್ದನು.

ಹೀಗೆ ಕೆಲವು ಕಾಲ ಕಳೆಯಿತು. ಮೈಸೂರಿನ ಸುದಿನಗಳು ಕಣ್ಮರೆ ಯಾದವು. ರಾಜನಿಗೆ ಆಕಸ್ಮಿಕವಾಗಿ ರೋಗ ಸಂಭವಿಸಿ, ಆತನು ಕಾಲಾ ಧೀನನಾದನು. ಆತನಿಗೆ ಗಂಡುಮಕ್ಕಳಿರಲಿಲ್ಲವಾದುದರಿಂದ ರಾಣಿಯೇ ರಾಜ್ಯಭಾರವನ್ನು ವಹಿಸಿಕೊಳ್ಳಬೇಕಾಯಿತು.

ಮಹಾರಾಣಿಯು, ಪಾಪ! ಅಂತಃಪುರದಿಂದ ಹೊರಕ್ಕೆ ಬಂದರಿಯಳು; ಯಾರೊಂದಿಗೂ ಮಾತನಾಡುವಂತಿಲ್ಲ; ಯಾವ ಸಂಗತಿಯನ್ನೂ ಪ್ರತ್ಯಕ್ಷ ನೋಡಿ ತಿಳಿಯುವಂತಿಲ್ಲ. ಸುತ್ತಮುತ್ತಲೂ ದುಷ್ಟರೂ ದುರಹಂಕಾರಿಗಳೂ ಆದ ಪಾಳೆಯಗಾರರು. ಯಾವ ಹೊತ್ತಿಗೆ ಯಾರು ದಂಡೆತ್ತಿಬಂದು ರಾಜ್ಯವನ್ನು ಆಕ್ರಮಿಸುವರೋ ಎಂಬ ಭೀತಿ. ಹೀಗೆ ರಾಣಿಯು ಸದಾ ಚಿಂತೆಯಿಂದ ಕೊರಗುತ್ತ, ದಿನಗಳನ್ನು ಯುಗಗಳಾಗಿ ಕಳೆಯುತ್ತ, ಮುಂದೇನು ಮಾಡಬೇಕೆಂದು ತೋರದೆ ಕಾಲಕಳೆಯುತ್ತಿದ್ದಳು.

ಹೀಗೆ ದುಃಖಕ್ಕೆ ಈಡಾಗಿ ಕಾಲವನ್ನು ನೂಕುತ್ತಿದ್ದ ಆಕಗೆ ಮತ್ತೊಂದು ಸಂಕಟವೂ ಬಂದೊದಗಿತು; ಚಾಮರಾಜರ ಕಾಲದಲ್ಲಿ ದಂಡನಾಯಕ ಅಥವಾ ಸೇನಾಧಿಕಾರಿಯಾಗಿದ್ದ ಮಾರನಾಯಕನೆಂಬವನು ರಾಜ್ಯದಲ್ಲಿ ಪ್ರಬಲನಾಗಿದ್ದನು. ಸೈನ್ಯವೆಲ್ಲ ಅವನ ಆಜ್ಞೆಗೆ ಒಳಪಟ್ಟಿತ್ತು. ವ್ಯವಸ್ಥೆಗೊಳಪಟ್ಟ ರಾಜ್ಯಭಾರವಿಲ್ಲದಿದ್ದ ಆ ಕಾಲದಲ್ಲಿ ಸೈನ್ಯಬಲವೇ ರಾಜ್ಯದ ಮುಖ್ಯ ಅಂಗವಾಗಿತ್ತು. ಆದುದರಿಂದ ಮೈಸೂರು ರಾಜ್ಯದಲ್ಲಿ ಮಾರನಾಯಕನ ಆಡಳಿತವು ನಿರಂಕುಶವಾಗಿತ್ತು.

ಮಾರನಾಯಕನು ದಿನದಿನಕ್ಕೆ ಜನಬಲ ಧನಬಲಗಳನ್ನು ಹೆಚ್ಚಿಸಿಕೊಂಡು ಕೊಬ್ಬಿದನು. ಅವನ ಅಪ್ಪಣೆಗೆ ಎದುರೇ ಇಲ್ಲವಾಯಿತು. ಮೈಸೂರು ರಾಜ್ಯವನ್ನು ತಾನೇ ಆಕ್ರಮಿಸಿ ರಾಜನಾಗಬಾರದೇಕೆ? ಎಂಬ ದುರಾಶೆಯೂ ಅವನಿಗುಂಟಾಯಿತು. ರಾಜವಂಶಕ್ಕೆ ಆಗ ಬಂದೊದಗಿದ್ದ ವಿಪತ್ತಿನಲ್ಲಿ ಅವನು ಏನು ಮಾಡಿದರೂ ತಡೆಯೇ ಇರಲಿಲ್ಲ. ರಾಜಪತ್ನಿಯು ಕೇವಲ ನಿರುಪಾಯಳಾಗಿದ್ದಳು. ರಾಜಬಂಧುಗಳಲ್ಲಿ ಆಕೆಗೆ ಬೆಂಬಲಕೊಡಲು ಶಕ್ತರಾದವರು ಒಬ್ಬರೂ ಇರಲಿಲ್ಲ. ಈ ಸ್ಥಿತಿಯನ್ನು ಕುರಿತು ಯೋಚಿಸಿದ ಆ ನಾಯಕನ ಮನಸ್ಸಿನಲ್ಲಿ ಮತ್ತೊಂದು ಪಾಪಬುದ್ಧಿಯೂ ಹುಟ್ಟಿತು.

ಚಾಮರಾಜರಿಗೆ ಗಂಡುಸಂತತಿ ಇಲ್ಲದಿದ್ದುದು ಸರಿಯಷ್ಟೆ! ಆದರೆ ಚಿಕ್ಕದೇವರಸಿಯೆಂಬ ಪುತ್ರಿಯೊಬ್ಬಳಿದ್ದಳು. ಪ್ರಾಯಪ್ರಬುದ್ಧಳಾದ ಆ ಮಗಳನ್ನೇ ರಾಜಪತ್ನಿ ದೇವಾಜಮ್ಮಣ್ಣಿಯು ತನ್ನ ಜೀವಿತಕ್ಕೆ ಏಕಮಾತ್ರ ಆಧಾರವೆಂದು ತಿಳಿದುಕೊಂಡಿದ್ದಳು. ಆ ಮಗಳನ್ನು ಒಬ್ಬ ಯೋಗ್ಯ ರಾಜಪುತ್ರನಿಗೆ ಮದುವೆಮಾಡಿ, ಆ ಮಗಳು ಅಳಿಯಂದಿರಿಗೇ ರಾಜ್ಯವನ್ನು ಬಳುವಳಿಯಾಗಿ

ಕೊಟ್ಟು,—ಹೀಗೆ ರಾಜ್ಯಕ್ಕೆ ಒಂದು ಗತಿಯನ್ನು ಕಲ್ಪಿಸಬೇಕೆಂಬುದೇ ಆಕೆಯ ಹಂಬಲಾಗಿತ್ತು. ಗಂಡು ದಿಕ್ಕಿಲ್ಲದ ತಮ್ಮ ಮನೆತನವು ಆ ಮೂಲಕವಾದರೂ ಅಭಿವೃದ್ಧಿಗೊಂಡು ದೌಹಿತ್ರಸಂತತಿಯು ಬೆಳೆಯಲಿ ಎಂದು ಆಕೆಯು ಆಸೆಗೊಂಡಿದ್ದಳು. ಆದರೆ ಪಾಪಿ ಮಾರನಾಯಕನ ಮನಸ್ಸಿನಲ್ಲಿ ವಂಶನಾಶಕರವಾದ ಒಂದು ದುರಾಲೋಚನೆಯು ಹುಟ್ಟಿ ಬೆಳೆಯುತ್ತಿದೆಯೆಂಬ ಸಂಗತಿಯು, ಪಾಪ! ಆಕೆಗೆ ಹೇಗೆ ತಿಳಿಯಬೇಕು?

ಆದರೆ ಪಾಪಯೋಚನೆಯು ಎಷ್ಟುದಿನ ಅಡಗಿರಲು ಸಾಧ್ಯ! ನಾಯಕನ ದುರಾಲೋಚನೆಯ ವಿಚಾರವು ಮಹಾರಾಣಿಗೆ ತಿಳಿದುಹೋಯಿತು. ಆ ಸಂಗತಿಯನ್ನು ಕೇಳಿದೊಡನೆಯೇ ಆಕೆಗೆ ಮೈನಡುಗಿತು; ಮನಸ್ಸಿನಲ್ಲಿ ಹೇಳಲಾಗದ ವ್ಯಥೆಯುಂಟಾಯಿತು; ಮುಂದೇನು ಮಾಡಬೇಕೆಂದು ತೋರದೆ ರಾಣಿಯು ಬಹು ಚಿಂತಾಕ್ರಾಂತಳಾದಳು. ಪತಿಯು ಮೃತನಾಗಿ ತಮಗೆ ದಿಕ್ಕಿಲ್ಲದಂತಾದ ದುಃಖವೊಂದು; ಗಂಡುಸಂತತಿಯಿಲ್ಲದೆ ವಂಶವು ನಿಂತುಹೋಗುವಂತಾದ ಚಿಂತೆಯೊಂದು; ಪ್ರಬುದ್ಧಳಾದ ಮಗಳಿಗೆ ಯೋಗ್ಯ ವರನು ದೊರೆತು ವಿವಾಹವಾಗಲಿಲ್ಲವಲ್ಲಾ ಎಂಬ ವ್ಯಸನವೊಂದು; ಸಾಲದುದಕ್ಕೆ ಪವಿತ್ರ ರಾಜವಂಶದಲ್ಲಿ ಹುಟ್ಟಿದ ತಮ್ಮ ಮಗಳ ಮೇಲೆ ದುಷ್ಟನೂ ಪ್ರಬಲನೂ ಘಾತುಕನೂ ಆದ ತೊರೆಯ ಮಾರನಾಯಕನು ಕಣ್ಣು ಹಾಕಿರುವನಲ್ಲಾ ಎಂಬ ಕರುಳನ್ನು ಕೊರೆವ ಅಗಾಧ ಮನೋವ್ಯಥೆಯೊಂದು; —ಇಷ್ಟು ಬಗೆಯ ಚಿಂತೆಗಳು ಒಂದಾಗಿ ಬೆರೆದು ಆ ಸಾಧ್ವಿಯು ಹತಾಶಳಾದಳು; ಮುಂದೆ ದಿಕ್ಕೇ ತೋರದಂತಾಯಿತು.

ಏನು ಮಾಡಿ ಈ ಕಷ್ಟದಿಂದ ಪಾರಾಗಬಹುದೆಂದು ಎಷ್ಟೋ ಬಗೆಯಿಂದ ಆ ಸಾಧ್ವೀಮಣಿಯು ಆಲೋಚಿಸಿದಳು; ಯಾವುದೂ ಸರಿದೋರಲಿಲ್ಲ. ಸುತ್ತಮುತ್ತಲಿನ ಪಾಳೆಯಗಾರರಲ್ಲಿ ಯಾರ ಸಹಾಯವನ್ನಾದರೂ ಕೇಳೋಣವೇ ಎಂಬ ಯೋಚನೆಯುಂಟಾಯಿತು. ಪಾಳೆಯಗಾರರೆಲ್ಲರೂ ತೊರೆಯ, ಬೇಡ ಮುಂತಾದ ಹೀನಕುಲದವರೇ! ಅವರನ್ನು ನಂಬುವುದು ಹೇಗೆ? ಇಂದು, ಒಂದುವೇಳೆ ಈ ದುರುಳನನ್ನು ಅಡಗಿಸಿದ ಪಾಳೆಯಗಾರನು ನಾಳೆ ಇವನಂತೆಯೇ ದುರಾಲೋಚನೆಮಾಡಿದರೆ ಮುಂದೆ ಮಾಡುವುದೇನು? ಆದುದರಿಂದ ಮಾರನಾಯಕನಿಗೇ ಒಳ್ಳೆಯ ಮಾತಿನಿಂದ ಇಂತಹ ಪಾಪ

ಯೋಚನೆ ಮಾಡಬಾರದೆಂದು ಹಿತೋಕ್ತಿಗಳನ್ನು ಹೇಳಿಕಳುಹಿಸೋಣವೇ ಎಂದು ತೋರಿತು. ಆದರೆ, ಯೌವನ, ಧನಸಂಪತ್ತು, ಪ್ರಭುತ್ವ—ಇವುಗಳಿಂದ ಕೊಬ್ಬಿರುವ ಅವಿವೇಕಿಯಾದ ಆ ನೀಚನು ತನ್ನ ಹಿತೋಕ್ತಿಗಳನ್ನು ಮನ್ನಿಸುವನೇ? ಪಾಪ, ಪುಣ್ಯ, ದೇವರು, ಧರ್ಮ—ಇವುಗಳ ಗಂಧವನ್ನೇ ಅರಿಯದ ಆ ನೀಚನಿಗೆ ಧರ್ಮಬೋಧೆಯು ರುಚಿಸೀತೆ? ಮುಂದೇನು ಮಾಡುವುದು? ಹೀಗೆ ಹಲವು ಬಗೆಯಿಂದ ಯೋಚಿಸಿದಳು. ಯಾವುದೂ ಯುಕ್ತವೆಂದು ತೋರಲಿಲ್ಲ. ಆಗ ಮನಸ್ಸನ್ನು ಗಟ್ಟಿಮಾಡಿಕೊಂಡು, 'ಇನ್ನು ಚಿಂತಿಸಿ ಫಲವಿಲ್ಲ; ನಮ್ಮ ಗತಿಯು ಇಷ್ಟೇ ಎಂದು ತೋರುತ್ತದೆ; ಆ ದುರುಳನು ತನ್ನ ದುಷ್ಟ ಪರಿವಾರದೊಂದಿಗೆ ಯಾವ ಗಳಿಗೆಗೆ ಬಂದು ಏನು ದುಷ್ಕಾರ್ಯ ಮಾಡುತ್ತಾನೆಂದು ತಿಳಿಯುವುದು ಅಸಾಧ್ಯ; ಇಷ್ಟು ದಿನಗಳೂ ಮಾನದಿಂದ ಬದುಕಿ ಈಗ ಈ ನೀಚನಿಂದ ಅವಮಾನಗೊಂಡು ಪ್ರಾಣಬಿಡುವುದು ಯೋಗ್ಯವಲ್ಲ; ಇಷ್ಟು ಬಗೆಯ ಆಪತ್ತಿಗೆ ಸಿಲುಕಿರುವ ನಮಗೆ ಈಗ ಮೃತ್ಯುವಲ್ಲದೆ ಬೇರೆ ಶರಣರಿಲ್ಲ; ಆದುದರಿಂದ ಮಾನಾಪಹಾರವಾಗುವುದಕ್ಕೆ ಮುಂಚೆ ಪ್ರಾಣತ್ಯಾಗ ಮಾಡುವುದೇ ಇದಕ್ಕೆ ಯುಕ್ತ ಪರಿಹಾರ' ಎಂದು ಯೋಚಿಸಿ ನಿರ್ಧರಿಸಿದಳು.

ಎಷ್ಟು ಬಗೆಯಿಂದ ಪುನಃಪುನಃ ಆಲೋಚಿಸಿದರೂ ಬೇರೆ ಉಪಾಯ ತೋರಲಿಲ್ಲ. ಅಷ್ಟರಲ್ಲಿ, ಮಾರನಾಯಕನ ಕಡೆಯ ದೂತನೊಬ್ಬನು ಬಂದು, ಅರಮನೆಯ ಬಾಗಿಲಲ್ಲಿ ನಿಂತಿದ್ದಾನೆಂದು ಒಬ್ಬ ದಾಸಿಯು ಬಂದು ತಿಳಿಸಿದಳು. ಸಂಗತಿಯೇನೆಂದು ವಿಚಾರಿಸಲು, "ಇನ್ನು ಮೂರು ದಿನಗಳ ಅವಧಿ ಕೊಟ್ಟಿದ್ದೇನೆ; ಆ ಅವಧಿಯೊಳಗಾಗಿ ರಾಜಪುತ್ರಿಯನ್ನು ನನ್ನ ವಶಕ್ಕೆ ಒಪ್ಪಿಸಬೇಕು; ತಪ್ಪಿದಲ್ಲಿ ಅರಮನೆಯನ್ನು ಹೊಕ್ಕು ಬಲಾತ್ಕಾರದಿಂದ ರಾಜಪುತ್ರಿಯನ್ನು ಸೆಳೆದೊಯ್ದು ಲಗ್ನಮಾಡಿಕೊಳ್ಳುವೆನು, ತಿಳಿದಿರಲಿ" ಎಂದು ಕ್ರೂರ ಮಾರನಾಯಕನು ಹೇಳಿಕಳುಹಿಸಿದ್ದ ಕರ್ಣಕಠೋರ ವಾರ್ತೆಯನ್ನು ಆ ದೂತನು ತಿಳಿಸಿದನು. ಆ ಮಾತನ್ನು ಕೇಳಿದಾಗ ಆ ರಾಜಪತ್ನಿಯ ಮನಸ್ಸಿನ ಸ್ಥಿತಿಯು ಹೇಗಿದ್ದಿರಬಹುದು! ಸಂದೇಹವು ನೀಗಿತು; ಇನ್ನು ಮೂರು ದಿನಗಳು ಕಳೆದಮೇಲೆ ತಮ್ಮ ಮಾನಾಪಹಾರವಾಗುವುದು

ಮಹಾರಾಣಿಯು ತನಗೆ ಮೃತ್ಯುವು ಕಳುಹಿಸಿದ ಸಂದೇಶವೆಂದು ತಿಳಿದಳು. ಒಡನೆಯೇ, ಇನ್ನು ನಾವಕಾಶವೇಕೆಂದು ಮಹಾರಾಣಿಯು, ಅಂತಃಪುರದ ಒಂದು ಭಾಗದ ಬಯಲಿನಲ್ಲಿ ಅಗ್ನಿಕುಂಡವು ಸಿದ್ಧವಾಗಲಿ ಎಂದು ಬಳಿಯಲ್ಲಿದ್ದ ದೂತರಿಗೆ ಆಜ್ಞಾಪಿಸಿದಳು.

ಅಂತಃಪುರದ ಒಂದು ಭಾಗದ ಬಯಲು ಪ್ರದೇಶದಲ್ಲಿ ಅಗ್ನಿಕುಂಡವು ಸಿದ್ಧವಾಯಿತು. ಅರಮನೆಯ ಕೆಲಸಗಾರ್ತಿಯರಾದ ಅಸ್ವೆಯರು ವಿಶೇಷ ಕಳವಳಗೊಂಡಿದ್ದಾರೆ; ಅವರಿಗೆ ದಿಕ್ಕೇ ತೋರದಂತಾಗಿದೆ; ಮಹಾರಾಣಿಯು ಜೀವಿತದಲ್ಲಿ ರೋಸಿ ಅಗ್ನಿಪ್ರವೇಶಮಾಡಿ ದೇಹತ್ಯಾಗಮಾಡಲು ಸಿದ್ಧಳಾಗಿದ್ದ ವಾರ್ತೆಯು ಕ್ರಮ ಕ್ರಮವಾಗಿ ಅರಮನೆಯ ಎಲ್ಲ ಭಾಗವನ್ನೂ ವ್ಯಾಪಿಸಿ ಅಂತಃಪುರದ ಸ್ತ್ರೀಜನರೆಲ್ಲರೂ ಒಂದೆಡೆ ನೆರೆದರು. ಬಂಡಿಗಟ್ಟಲೆ ಹಾಕಿ ಉರಿಸಿದ ಕಟ್ಟಿಗೆಯು ಹೊತ್ತಿಕೊಂಡು ಚಟ ಚಟ ಎಂದು ಕಿಡಿಗಳನ್ನೆಗುರಿ ಸುತ್ತ ಹೊಗೆಯು ಅಲ್ಲೆಲ್ಲ ವ್ಯಾಪಿಸಿರಲು, ಸ್ವಲ್ಪಹೊತ್ತಿನಲ್ಲೇ ಅಗಾಧವಾದ ಜ್ವಾಲೆಯು ಧಗ ಧಗನೆ ಉರಿಯಲಾರಂಭಿಸಿತು. ಇಂತಹ ಬೆಂಕಿಯ ರಾಶಿ ಯಲ್ಲಿ ಸುಕುಮಾರಾಂಗಿಯಾದ ನಮ್ಮ ಮಹಾರಾಣಿಯವರು ಪ್ರವೇಶಿಸು ವರೇ? ಎಂಬ ಯೋಚನೆಯೇ ಆ ಸ್ತ್ರೀಸಮೂಹವನ್ನು ಧೃತಿಗೆಡಿಸಿತು. ಪಾಪ! ಅವರೆಲ್ಲರೂ ಗಳಗಳನೆ ಅಳತೊಡಗಿದರು. ಅವರಲ್ಲಿ ಕೆಲವರು, ಮುಂದೆ ತಮಗಿನ್ನಾರು ದಿಕ್ಕು ಎಂದು ಹಾಡಿ ಹಾಡಿಕೊಂಡು ಅತ್ತರು. ಮಹಾರಾಣಿಯ ಸಮೀಪದಲ್ಲಿದ್ದ ಕೆಲಮಂದಿ ಆಪ್ತರಾದ ವೃದ್ಧ ದಾಸಿಯರು ಕೈಮುಗಿಯುತ್ತ, "ತಾಯೀ! ಬೇಡ, ಬೇಡ; ತಾವು ಇಂತಹ ಭಯಂಕರ ಕಾರ್ಯಮಾಡಲು ಯೋಚಿಸಬಹುದೇ? ಈ ಆಪತ್ತನ್ನು ನಿವಾರಿಸುವಂತೆ ದೇವರನ್ನು ಬೇಡಿಕೊಳ್ಳೋಣ" ಎಂದು ಕೇಳಿಕೊಂಡರು. ಮತ್ತೆ ಕೆಲವರು ಪಾದಕ್ಕೆ ಬಿದ್ದು, "ತಾಯೀ! ನಮ್ಮ ಮೇಲೆ ಏಕಿಷ್ಟು ನಿರ್ದಯ? ಆತ್ಮ ಹತ್ಯವು ಮಹಾಪಾಪಕಾರ್ಯವೆಂಬುದು ತಮಗೇನು ತಿಳಿಯದೆ? ಜೀವ ದೊಂದಿಗಿದ್ದರೆ ಎಂದಾದರೂ ಒಂದು ದಿನ ಸುಖಸಂಪತ್ತುಗಳನ್ನು ಕಾಣ ಬಹುದು. ಬೆಂಕಿಯಲ್ಲಿ ಬಿದ್ದು ಪ್ರಾಣಬಿಡುವಂತಹ ಭಯಂಕರ ಕಾರ್ಯವು ಸುಕುಮಾರಿಯರಾದ ರಾಜಸ್ತ್ರೀಯರಿಗೆ ಯೋಗ್ಯವಲ್ಲ; ತಾಯೀ! ಬೇಡ; ಈ ಯೋಚನೆಯನ್ನು ಬಿಡಿ" ಎಂದು ಬೇಡಿಕೊಂಡರು.

ದೇವಾಜಮ್ಮಣ್ಣಿಯು ತಲೆಯಮೇಲೆ ಕೈಹೊತ್ತು ಕುಳಿತಿದ್ದಾಳೆ ಪರ್ವತವೇ ಕಳಚಿ ತಲೆಯಮೇಲೆ ಬಿದ್ದಂತಿದೆ; ಕಷ್ಟ ದುಃಖ ವಿಪತ್ತುಗಳ ತೊಲಗುವ ಮಾರ್ಗವೇ ತೋರದು. ಆಗ ಆ ಸಾಧ್ವಿಯು, ಕಣ್ಣುಗಳ ಧಾರೆಧಾರೆಯಾಗಿ ನೀರು ಸುರಿಯುತ್ತಿರಲು, "ಅಮ್ಮಾ! ನೀವು ಹೇಳಿ ನಾನಿನ್ನೇಕೆ ಜೀವಿಸಿರಬೇಕು! ನನ್ನೀ ಬಾಳು ಭೂಮಿಗೆ ಭಾರವಾಗಿದೆ ಮಹಾರಾಜರೊಂದಿಗೆ ಇಷ್ಟು ಕಾಲ ಸಂಸಾರಮಾಡಿಕೊಂಡಿದ್ದರೂ ರಾಜ್ಯಕ್ಕೆ ದಿಕ್ಕಾಗುವ, ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗುವ, ಮನೆತನದ ದೀಪ ವನ್ನುಳಿಸುವ ಒಬ್ಬ ಮಗನನ್ನು ಪಡೆವ ಸುಯೋಗವು ಪಾಪಿಯಾದ ನನ್ನ ಹಣೆಯಲ್ಲಿ ಬರೆಯಲಿಲ್ಲ. ಹೋಗಲಿ, ಪ್ರಾಯಪ್ರಬುದ್ಧಳಾದ ಈ ಮಗಳ ನ್ನಾದರೂ ಒಬ್ಬ ಯೋಗ್ಯ ರಾಜಪುತ್ರನಿಗೆ ಮದುವೆಮಾಡಿಕೊಟ್ಟು ಆ ಮೂಲಕವಾದರೂ ರಾಜ್ಯಕ್ಕೊಂದು ದಿಕ್ಕನ್ನು ಕಲ್ಪಿಸೋಣವೆಂದ ಅದಕ್ಕೂ ಮಾರ್ಗವಿಲ್ಲ. ದುರ್ದೈವಿಯಾದ ನಾನು ಅಷ್ಟು ಮಾತ್ರ ಸುಖ ವನ್ನೂ ಕಾಣಲಾಗದೆಂದು ದೈವವು ಸಂಕಲ್ಪಮಾಡಿದಂತಿದೆ. ಕ್ರೂರನೂ ದುರುಳನೂ ಘಾತುಕನೂ ಆದ ಮಾರನಾಯಕನ ಬಾಧೆ ಸಹಿಸುವಂತಿಲ್ಲ ಉತ್ತಮ ಕ್ಷತ್ರಿಯ ವಂಶದಲ್ಲಿ ಉತ್ಪನ್ನಳಾಗಿ ಸುಕುಮಾರಿಯಾಗಿರುವ ರಾಜ ಪುತ್ರಿಯನ್ನು ಹಿಡಿಂಬಾಸುರನಂತಿರುವ ಆ ತೊರೆಯನು ಅಪಹರಿಸುವುದನ್ನು ಕಣ್ಣಾರೆ ನೋಡಿಕೊಂಡು ಹೇಗೆ ಜೀವಿಸಿರಲಿ? ನನ್ನ ಈ ಜೀವಿತವು ನಿರರ್ಥಕ ವಾಯಿತು. ಮಹಾರಾಜರೊಂದಿಗೇ ಸಹಗಮನಮಾಡಿದ್ದರೆ ನನ್ನ ಮುತ್ತೈದ ತನವಾದರೂ ಸಾರ್ಥಕವಾಗುತ್ತಿತ್ತು. ಆಗ, 'ಮಗಳಿಗೆ ಯಾರೂ ದಿಕ್ಕಿಲ್ಲ ವಲ್ಲಾ! ಜೀವಿಸಿರು' ಎಂದು ತಡೆದಿರಿ. ನಾನೂ ಪುತ್ರಿಯ ಮೇಲಣ ವ್ಯಾಮೋಹಕ್ಕೆ ವಶಳಾಗಿ ಅಂದು ಜೀವದಿಂದುಳಿದೆ; ಇಂದು ಮಗಳನ್ನು ಸಂರಕ್ಷಿಸಲಾರದೆ ತಪಿಸಬೇಕಾಗಿ ಬಂತು. ಅತ್ತ, ಸದ್ಗತಿಯು ತಪ್ಪಿದು ದಲ್ಲದೆ, ಇತ್ತ ಭಯಂಕರ ದುರ್ಗತಿಯೂ ಪ್ರಾಪ್ತವಾಗಿರುವುದು; ಅಯ್ಯೋ ಏನುಮಾಡಲಿ! ನಮಗಿನ್ನಾರು ದಿಕ್ಕು?" ಎಂದು ರೋದಿಸತೊಡಗಿದಳು

ಆಗ ಒಬ್ಬ ವೃದ್ಧ ಚೇಟಿಯು, "ಅಮ್ಮಾ! ರಾಜವಂಶಕ್ಕೆ ಈಗ ಪ್ರಾಪ್ತ ವಾಗಿರುವ ಆಪತ್ತಿಗೆ ಕೊನೆಮೊದಲಿಲ್ಲ. ಆದರೆ, ಕಷ್ಟ ದುಃಖ ಸಂಕಟಗಳ

ಪರಮಾತ್ಮನ ದಯೆಯುಂಟಾಗಿ ಏನಾದರೊಂದು ಸಹಾಯವೊದಗುವುದು ಸ್ವಾಭಾವಿಕ. ಇದಕ್ಕೆ ಸಮಾನವೆನ್ನಿಸುವ ಕಷ್ಟವಿನ್ನಿಲ್ಲ! ಆದ್ದರಿಂದ ಏನಾದರೊಂದು ಸಹಾಯವು ದೈವಿಕವಾಗಿ ಈಗ ಒದಗುವುದೋ ಎಂದು ನೋಡೋಣ. ತಮ್ಮ ಕುಲದೇವತೆ ಚಾಮುಂಡಾಂಬಿಕೆಗೆ ಹರಕೆಯನ್ನು ಕಟ್ಟಿಟ್ಟು ಬೇಡಿಕೊಳ್ಳಿರಿ. ಆತುರಪಟ್ಟು ಆತ್ಮಹತ್ಯಮಾಡಿಕೊಂಡರೆ ಪ್ರಯೋಜನವೇನು?" ಎಂದು ಬೇಡಿಕೊಂಡಳು.

ರಾಜಪತ್ನಿಯು ವ್ಯಸನಭಾರದಿಂದ ಮಾತನಾಡಲಾರದೆ ಸ್ವಲ್ಪಹೊತ್ತು ಸುಮ್ಮನಿದ್ದು, ತರುವಾಯ "ಅಯ್ಯೋ! ಈ ಬಗೆಯ ಒಣ ಸಮಾಧಾನದ ಮಾತುಗಳಿಂದ ಪ್ರಯೋಜನವೇನು? ದೇವರ ದಯೆ ನಮ್ಮ ಮೇಲಿದ್ದರೆ ಇಷ್ಟು ಪರೀಕ್ಷೆ ಮಾಡಬೇಕೆ? ಅಮ್ಮನವರು ಕೃಪೆಮಾಡಿ ನಮಗೆ ಒಂದು ದಿಕ್ಕನ್ನು ಕಲ್ಪಿಸಬೇಕೆಂದರೆ ಅದಕ್ಕೆ ತಡೆಯೇನಿದೆ? ಇಲ್ಲ; ಇಲ್ಲ; ದುರ್ದೈವಿಗಳಾದ ನಮ್ಮ ಮೇಲೆ ದೇವರ ದಯೆ ಹೇಗುಂಟಾದೀತು? ದೇವರು ಎಂದಿಗೋ ಕಣ್ತೆರೆದು ನೋಡುವನೆಂದು ಸಮಾಧಾನದಿಂದ ಕಾದಿರುವುದಕ್ಕಾದರೂ ನಮಗೆ ಅವಕಾಶವೆಲ್ಲಿದೆ? ಕ್ರೂರ ಮಾರನಾಯಕನಾದರೋ ಇನ್ನು ಮೂರು ದಿನಗಳೊಳಗಾಗಿ ರಾಜಪುತ್ರಿಯನ್ನು ತನಗೆ ಒಪ್ಪಿಸದಿದ್ದರೆ ತಾನೇ ಬಲಾತ್ಕಾರದಿಂದ ಆಕೆಯನ್ನು ಸೆಳೆದೊಯ್ಯುವೆನೆಂದು ಗಡುವಿಟ್ಟಿದ್ದಾನೆ. ಕ್ಷಣ ಕ್ಷಣವೂ ಆ ಭೂತವು ಕಣ್ಣೆದುರಿಗೆ ನಿಂತಂತೆ ನನಗೆ ಗಾಬರಿಯಾಗುತ್ತಿದೆ. ಮಾನವಂತರಾಗಿ ಬದುಕಿ ಬಾಳಿದ ನಾವು ಇನ್ನೂ ಸಾವಕಾಶಮಾಡಿ ದುಷ್ಟರ ಕೈಗೆ ಸಿಕ್ಕಿ ಮಾನ ಕಳೆದುಕೊಳ್ಳುವುದು ಒಳ್ಳೆಯದಲ್ಲ. ಹಾಗೆ ಮಾನವೇ ಹೋದ ಮೇಲೆ ಅನಂತರ ಪ್ರಾಣದಿಂದ ಬದುಕಿದ್ದು ತಾನೆ ಪ್ರಯೋಜನವೇನು? ಅದನ್ನು ದೀರ್ಘವಾಗಿ ಯೋಚಿಸಿಯೇ, ಯಜಮಾನರ ಚಿತ್ರಪಟದೊಂದಿಗೆ ಅಗ್ನಿಪ್ರವೇಶಮಾಡಿ ದೇಹತ್ಯಾಗಮಾಡಬೇಕೆಂದು ನಿಶ್ಚೈಸಿದ್ದೇನೆ. ಆದರಿಂದ ಆತ್ಮಹತ್ಯಾ ದೋಷವೂ ತಟ್ಟಲಾರದೆಂದು ದೃಢವಾಗಿ ನಂಬಿದ್ದೇನೆ. ಮುಂದೆ ದೇವರು ಮಾಡಿಸಿದಂತಾಗಲಿ" ಎಂದು ನುಡಿದಳು.

ಆ ಮಾತನ್ನು ಕೇಳಿದ ದಾಸಿಯು ಮಹಾರಾಣಿಯ ಎರಡು ಪಾದಗಳನ್ನೂ ಹಿಡಿದುಕೊಂಡು "ಅಮ್ಮಯ್ಯಾ! ತಾವು ಹೇಳುವ ಮಾತು ಸುಳ್ಳಲ್ಲ; ಆದರೆ ಮಗಳಿಗೋಸ್ಕರವೇ ಎಂದು ಅಂದು ಮಹಾರಾಜರೊಂದಿಗೆ ತಾವು

ಸಹಗಮನಮಾಡದೆ ಜೀವಿಸಿದುದು ನಿಶ್ಚಯವಾಗಿದ್ದರೆ, ಈಗ ಆಕೆಯನ್ನು ಅನಾಥಳನ್ನಾಗಿ ಮಾಡಬಹುದೆ? ಆಕೆಯ ಮಾನ ಪ್ರಾಣಗಳಿಗೆ ಈಗ ಇನ್ನೂ ಹೆಚ್ಚಿನ ಅಪಾಯಸ್ಥಿತಿಯೊದಗಿಲ್ಲವೆ? ತಾವು ಮಾತ್ರ ಅಗ್ನಿಪ್ರವೇಶಮಾಡಿ ದುಃಖವನ್ನು ನೀಗಿಕೊಂಡರೆ ಏಕಾಂಗಿಯಾಗಿ ಅರಮನೆಯಲ್ಲಿ ಉಳಿಯುವ ದುರ್ದೈವಿ ರಾಜಪುತ್ರಿಯನ್ನು ಆ ಮರುಳನು ಮುಂದೆ ಎಷ್ಟು ಬಗೆಯಿಂದ ಪೀಡಿಸಬಹುದೆಂದು ತಾವು ಯೋಚಿಸಬೇಕಲ್ಲವೆ? ಮರಣದ ಮರೆಯಲ್ಲಿ ತಾವು ಮಾತ್ರ ಪಾರಾದರೆ ಆಯಿತೆ? ರಾಜಪುತ್ರಿಯ ಮುಂದಿನ ಯೋಗ ಕ್ಷೇಮವನ್ನೂ ಗಮನಿಸಬೇಕಲ್ಲವೆ?" ಎಂದು ಬೇಡಿಕೊಂಡಳು.

ವ್ಯಸನಾಧಿಕ್ಯದಿಂದ ಮುಂದುತೋರದೆ ಕುಳಿತಿದ್ದ ಮಹಾರಾಣಿಗೆ ಇಷ್ಟು ಹೊತ್ತೂ, ತನ್ನ ತರುವಾಯ ಮಗಳ ಗತಿ ಏನಾಗಬಹುದೆಂಬ ಯೋಚನೆಯೇ ತೋರಿರಲಿಲ್ಲ. ಆ ಸಂಗತಿಯನ್ನು ಆ ವೃದ್ಧ ಚೇಟಿಯು ಜ್ಞಾಪಿಸಿದ್ದು ಆಕೆಗೆ ಕಣ್ಣಿನ ಪರೆ ತೆಗೆದಂತಾಯಿತು. ಆಗ ಸ್ವಲ್ಪಹೊತ್ತು ಏನು ಹೇಳಬೇಕು? ಮುಂದೇನು ಮಾಡಬೇಕು? ಎಂದು ತೋರದೆ ಮಂಕ ಳಂತೆ ಕುಳಿತಿದ್ದಳು. ಆ ಸಮಯದಲ್ಲಿ ಅಕಸ್ಮಾತ್ತಾಗಿ ಆಕೆಯ ಎಡದ ಹುಬ್ಬು ಬಿಡದೆ ಎರಡು ಮೂರು ವೇಳೆ ಹಾರಿತು. ಆ ಶುಭ ಸೂಚನೆಯು ಆಕೆಯ ಮನಸ್ಸಿನಲ್ಲಿ ಏನೋ ಒಂದು ಬಗೆಯ ಆಸೆಯನ್ನು ಹುಟ್ಟಿಸಿತು. ಮುಂದೆ ಚಾಮುಂಡಾಂಬಿಕೆಯ ದಯೆಯಿಂದ ಏನಾದರೊಂದು ಸಹಾಯ ಒದಗಬಹುದು, ಶುಭವುಂಟಾಗಬಹುದು ಎಂದು ತೋರಿತು. ಒಡನೆಯೇ ಆಕೆಯು, "ಗೆಳತೀ! ನಿನ್ನ ಮಾತು ನಿಶ್ಚಯ. ನೀನು ಈ ಕ್ಷಣದಲ್ಲಿ ನನ್ನ ಪ್ರಯತ್ನವನ್ನು ನಿಲ್ಲಿಸದಿದ್ದರೆ ಮಹಾ ಪ್ರಮಾದವಾಗುತ್ತಿತ್ತು. ವ್ಯಸನ ದಿಂದ ಮುಂಗಾಣದೆ ಕುಳಿತಿದ್ದ ನನಗೆ ಮಗಳ ಯೋಗಕ್ಷೇಮದ ಸ್ಮರಣೆಯೇ ಉಂಟಾಗಲಿಲ್ಲ. ಕಷ್ಟವೊದಗಿತೆಂದು ಪ್ರಾಣಬಿಡುವುದು ಹೇಡಿತನವೆಂಬುದು ನನಗೇನು ತಿಳಿಯದೆ? ಆದರೂ ಏನು ಮಾಡಲಿ? ಬಿಡು; ಇನ್ನು ಆ ಯೋಚನೆಯೇಕೆ? ಆ ವಿಷ ಗಳಿಗೆಯು ಕಳೆಯಿತು. ಈಗಲೇ ನನ್ನ ಎಡದ ಹುಬ್ಬು ಅದುರುತ್ತಿದೆ. ಇದೇನೋ ಶುಭಸೂಚನೆಯೆಂದು ತೋರು ತ್ತಿದೆ. ನೀನು ಹೇಳಿದಂತೆ ಏನಾದರೊಂದು ಬಗೆಯಿಂದ ಈ ಕಷ್ಟಪರಿಹಾರದ ಉಪಾಯವು ತೋರುವುದೇ ಎಂದು ನೋಡೋಣ. ಆ ನೀಚನು ಹೇಳಿ

ಕಳುಹಿಸಿದುದು ಇದೇ ದಿನ; ಇನ್ನೂ ಎರಡು ದಿನಗಳ ಅವಧಿ ಇದೆಯಷ್ಟೆ! 'ಧೈರ್ಯಂ ಸರ್ವತ್ರ ಸಾಧನಂ' ಎಂದು ದೊಡ್ಡವರು ಹೇಳುತ್ತಾರಲ್ಲ! ಕೊನೆಯ ವರೆಗೂ ನೋಡೋಣ. ದುರ್ದೈವಿಗಳಾದ ನಮ್ಮ ಪಾಡು ಕೊನೆಗೂ ಇಷ್ಟೇ ಎಂದಾದರೆ, ಇಂದು ಮಾಡುವ ಕೆಲಸವನ್ನೇ ನಾಳಿದ್ದು ಮಾಡಿದ ರಾಯಿತು" ಎಂದು ಸಮಾಧಾನಮಾಡಿಕೊಂಡಳು.

ಮಹಾರಾಣಿಯು ಹಾಗೆ ಸಮಾಧಾನಗೊಂಡುದು ಎಲ್ಲರಿಗೂ ಪರಮಾ ನಂದವನ್ನುಂಟುಮಾಡಿತು. ಒಡನೆಯೇ ಇನ್ನು ಹೆಚ್ಚು ಹೊತ್ತು ಬೆಂಕಿಯು ಅಲ್ಲೇ ಉರಿಯುತ್ತಿದ್ದರೆ ಮನಸ್ಸು ಮತ್ತೆ ಹೇಗೆ ಬದಲಾಗಬಹುದೋ ಎಂದು ಕೊಂಡು, ಎಲ್ಲರೂ ಒಂದೊಂದು ಬಿಂದಿಗೆ ನೀರು ತಂದು ಸುರಿದು ಆ ಬೆಂಕಿಯ ರಾಶಿಯನ್ನು ಆರಿಸಿಬಿಟ್ಟರು.

ಒಂದು ಮಹದಾಪತ್ತು ನಿವಾರಣೆಯಾಯಿತೆಂಬ ಸಂತೋಷದಿಂದ ಅಲ್ಲಿ ಬಂದು ನೆರೆದಿದ್ದ ಹೆಂಗಸರೆಲ್ಲರೂ ಒಬ್ಬೊಬ್ಬರಾಗಿ ಅಲ್ಲಿಂದ ಹೊರಟು ನಡೆದರು. ಏಕಾಂಗಿಯಾಗಿ ಉಳಿದ ರಾಜಪತ್ನಿಗೆ ಆಗ ಮಗಳ ಜ್ಞಾಪಕ ವಾಯಿತು. ಬಹಳ ಹೊತ್ತಿನಿಂದ ಆಕೆಯನ್ನು ನೋಡಿರಲಿಲ್ಲವಾದ್ದರಿಂದ ಆಕೆ ಎಲ್ಲಿದ್ದಾಳೆಂದು ಹುಡುಕಲು ತಾನೇ ಹೊರಟಳು. ಎಲ್ಲಿ ನೋಡಿದರೂ ಆಕೆಯ ಸುಳಿವೇ ಇಲ್ಲ; ಮನಸ್ಸಿಗೆ ಬಹು ಗಾಬರಿಯಾಯಿತು. ಅರಮನೆಯ ಕೊಠಡಿಗಳನ್ನೆಲ್ಲಾ ಸುತ್ತಿ ಸುತ್ತಿ ನೋಡಿದುದಾಯಿತು; ಎಲ್ಲೂ ಇಲ್ಲ! ರಾಣಿಯು ಮಹಾಯೋಚನೆಯಿಂದ ದಾಸಿಯರನ್ನೆಲ್ಲ ಕರೆಯಿಸಿ ಅರಮನೆಯ ಎಲ್ಲ ಕೊಠಡಿಗಳನ್ನೂ ಬಿಡದೆ ಮತ್ತೊಮ್ಮೆ ಹುಡುಕಬೇಕೆಂದು ಅಪ್ಪಣೆ ಮಾಡಿದಳು. ಎಲ್ಲರೂ ದಿಕ್ಕುಗೆಟ್ಟು ಗಾಬರಿಯಿಂದ ಹುಡುಕತೊಡಗಿದರು. ಕೊನೆಗೆ ಎಲ್ಲೋ ಒಂದು ಮೂಲೆಯ ಕತ್ತಲು ಕೋಣೆಯಲ್ಲಿ ನೆಲದ ಮೇಲೆ ಯಾರೋ ಬಿದ್ದಿದ್ದಾರೆಂದು ಒಬ್ಬ ದಾಸಿಯು ಓಡಿಬಂದು ಮಹಾ ರಾಣಿಗೆ ಹೇಳಿದಳು.

ಆ ಮಾತನ್ನು ಕೇಳಿದೊಡನೆಯೇ ಗಾಬರಿಯಿಂದ ಎಲ್ಲರೂ ಅಲ್ಲಿಗೆ ಓಡಿದರು. ನೋಡಿದರೆ, ಅಲ್ಲಿ ರಾಜಪುತ್ರಿ ಚಿಕ್ಕದೇವರಸಿಯು ನೆಲದಮೇಲೆ ಮುಖವಡಿಯಾಗಿ ಬಿದ್ದಿದ್ದಾಳೆ! ಆ ದೃಶ್ಯವನ್ನು ನೋಡಿ ದೇವಾಜಮ್ಮಣ್ಣಿಗೆ ಉಸಿರೇ ಉಡುಗಿಹೋಯಿತು; ಕೈಕಾಲುಗಳಲ್ಲಿ ಬಲ ಕುಂದಿಹೋಯಿತು;

ಒಡನೆಯೇ ಓಡಿಹೋಗಿ ಮಗಳ ತಲೆಯನ್ನೆತ್ತಿ ತೊಡೆಯ ಮೇಲಿಟ್ಟು ಕೊಂಡಳು. ಸಮೀಪದಲ್ಲೇ ಒಂದು ಬಂಗಾರದ ಬಟ್ಟಲು! ಅದರಲ್ಲೇನಿದೆಯೆಂದು ಎತ್ತಿನೋಡಲು, ಕುಡಿಯಬೇಕೆಂದು ವಜ್ರವನ್ನು ಅರೆದಿಟ್ಟುಕೊಂಡಿದ್ದುದು ಕಾಣಿಸಿತು. ತಾನು ಬರುವುದು ಇನ್ನು ಸ್ವಲ್ಪ ತಡವಾಗಿದ್ದರೂ ಮಹಾ ಪ್ರಮಾದ ವಾಗುತ್ತಿತ್ತೆಂದು ತೋರಿತು. ಮಹಾದೇವಿ ಚಾಮುಂಡಾಂಬಿಕೆಯು ಸಕಾಲಕ್ಕೆ ತನ್ನನ್ನು ಕರೆತಂದುದಕ್ಕಾಗಿ ಸಹಸ್ರ ವಂದನೆಗಳನ್ನು ಅರ್ಪಿಸಿದಳು.

ತಣ್ಣೀರನ್ನು ತರಿಸಿ ತಲೆಗೆ ತಟ್ಟಿ, ಕಣ್ಣುಗಳಿಗೆ ಸವರಿ, ಗಾಳಿ ಬೀಸಲಾಗಿ ಸ್ವಲ್ಪ ಹೊತ್ತಿನಲ್ಲೇ ರಾಜಪುತ್ರಿಗೆ ಎಚ್ಚರವಾಯಿತು. "ಮಗೂ ! ಇದೇನು ಭಯಂಕರ ಕಾರ್ಯಮಾಡಲು ತೊಡಗಿದ್ದೆಯಮ್ಮಾ! ನಾನು ಬರುವುದು ಇನ್ನು ಸ್ವಲ್ಪ ಸಾವಕಾಶವಾಗಿದ್ದರೂ ಎಂತಹ ಪ್ರಮಾದವಾಗುತ್ತಿತ್ತಲ್ಲ! ಸುಕುಮಾರಿಯಾದ ನೀನು ಇಂತಹ ಯೋಚನೆಮಾಡಬಹುದೆ?" ಎಂದು ಮಹಾರಾಣಿಯು ಮಗಳನ್ನು ಬಾಚಿ ತಬ್ಬಿಕೊಂಡಳು.

"ಅಮ್ಮಾ! ಪಾಪಿಯಾದ ನಾನು ಏಕೆ ಬದುಕಿರಬೇಕು? ಹೇಳು! ನನ್ನಿಂದ ನಿನಗೊಂದು ಸುಖವಿಲ್ಲ, ವಂಶಕ್ಕೊಂದು ಕೀರ್ತಿಯಿಲ್ಲ, ಲೋಕ ಕ್ಕೊಂದು ಪ್ರಯೋಜನವಿಲ್ಲ. ನೀನು ಬೆಂಕಿಯನ್ನು ಹೊಕ್ಕು ಪ್ರಾಣಬಿಟ್ಟ ಮೇಲೆ ನಾನು ಬದುಕಿ ಮುಂದೆ ಮಾಡಬೇಕಾದುದೇನು? ಎಂದು ಹೀಗೆ ಪ್ರಾಣ ತ್ಯಾಗಮಾಡಲು ಯೋಚಿಸಿದೆ!" ಎಂದು ಬಿಕ್ಕಿ ಬಿಕ್ಕಿ ಅಳುತ್ತ, ತಾಯಿಯ ಕೊರಳನ್ನು ಅಪ್ಪಿಕೊಂಡಳು. ತಮಗೆ ಪ್ರಾಪ್ತವಾದ ಆ ದುಸ್ಥಿತಿಗಾಗಿ ತಾಯಿ ಮಕ್ಕಳಿಬ್ಬರೂ ಎಷ್ಟೋ ರೋದನಮಾಡಿದರು. ಆ ರೋದನವನ್ನು ನೋಡಿ ಅಲ್ಲಿ ನೆರೆದಿದ್ದ ಹೆಂಗಸರೆಲ್ಲ ಕಣ್ಣೀರು ಸುರಿಸುತ್ತ, ಹೋ! ಎಂದು ಗೋಳಿಟ್ಟರು.

ಹಾಗೆ ದುಃಖಾವೇಗದ ಒಂದು ಪ್ರವಾಹವು ಹರಿದು ಹೋದಮೇಲೆ ಸ್ವಲ್ಪಹೊತ್ತಿಗೆ ಎಲ್ಲರೂ ಸಮಾಧಾನಗೊಂಡರು. ಆಗ ದೇವಾಜಮ್ಮಣ್ಣಿಯು, "ಮಗಳೇ! ನಮ್ಮ ಪೂರ್ವ ದುಷ್ಕರ್ಮವಶವಾಗಿ ಬಂದೊದಗಿರುವ ಈ ಗಂಡಾಂತರಕ್ಕಾಗಿ ದುಃಖಪಟ್ಟು ಫಲವಿಲ್ಲ. ಕರ್ಮಫಲವನ್ನು ಅನುಭವಿಸಿ ತೀರಬೇಕಲ್ಲದೆ ಅದಕ್ಕಾಗಿ ಪ್ರಾಣಬಿಟ್ಟರೂ ಪ್ರಯೋಜನವಿಲ್ಲ. ನಾನೂ ಈ ದೇಹವನ್ನು ನೀಗಿ ಈ ವ್ಯಸನದ ಕಾರಣವನ್ನೆಲ್ಲ ಒಮ್ಮೆಗೇ ಕಳೆದು ಬಿಡೋಣವೆಂದು ಯೋಚಿಸಿದ್ದೆ; ಅಷ್ಟರಲ್ಲೇ ಏನೋ ಒಂದು ಶುಭ ಸೂಚನೆ

ತೋರಿತು. ಇನ್ನೂ ಎರಡು ದಿನಗಳ ಅವಧಿ ಇರುವುದರಿಂದ ಅಷ್ಟರಲ್ಲಿ ಅದನ್ನೂ ಪರೀಕ್ಷಿಸಿ ನೋಡಿ ಬಿಡೋಣವೆಂದು ಪ್ರಾಣತ್ಯಾಗಮಾಡದೆ ಉಳಿದೆ. ಇನ್ನು ಈ ಯೋಚನೆಯನ್ನು ಬಿಡು. ಮಹಾತಾಯಿ ಚಾಮುಂಡಾಂಬಿಕೆಯ ಪಾದಗಳಲ್ಲಿ ಭರವಸೆಯಿಟ್ಟು ನೋಡೋಣ. ದೇವಿಯು ನಮ್ಮನ್ನು ಬದುಕಿಸ ಬೇಕು, ನಮ್ಮಾ ರಾಜಕುಟುಂಬವನ್ನು ಊರ್ಜಿತಪಡಿಸಬೇಕು ಎಂದು ಕೃಪೆ ಮಾಡಿದರೆ ಇಂತಹ ಹತಾಶ ಸ್ಥಿತಿಯಲ್ಲೂ ನಮಗೆ ಸಹಾಯವನ್ನು ಒದಗಿಸಿ ಕಾಪಾಡಬಹುದು. ಆ ಮಹಾಮಾತೆಯ ಶಕ್ತಿಗೆ ಮೀರಿದ ಕಾರ್ಯವು ಯಾವುದಿದೆ?" ಎಂದು ನುಡಿದು ಮಗಳನ್ನು ಸಮಾಧಾನಪಡಿಸಿ, ಎಬ್ಬಿಸಿ, ತನ್ನೊಡನೆಯೇ ಕರೆದುಕೊಂಡು ಹೊರಟಳು.

ಆಗಲೇ ರಾತ್ರಿ ಬಹು ಹೊತ್ತಾಗಿದ್ದುದರಿಂದ ಎಲ್ಲಿಯವರಲ್ಲೇ ಮಲಗಿ ಬಿಟ್ಟರು. ರಾಜಪತ್ನಿಯು ಆ ಸಮಯದಲ್ಲಿ ಮಗಳನ್ನು ಬೇರೆ ಬಿಟ್ಟಿರಲಾರದೆ ತನ್ನೊಂದಿಗೇ ಮಂಚದ ಮೇಲೆ ಮಲಗಿಸಿಕೊಂಡಳು. ರಾತ್ರಿಯೆಲ್ಲ ದೇವಾ ಜಾಂಬಿಕೆಗೆ ಬಗೆ ಬಗೆಯ ಚಿಂತೆಗಳು ಮನಸ್ಸನ್ನು ಆವರಿಸಿ ಎಷ್ಟೋ ಹೊತ್ತಿನ ವರೆಗೆ ನಿದ್ರೆಬಾರದಂತೆ ಬಾಧಿಸಿದುವು. ಕೊನೆಗೆ ಬೆಳಗಿನ ಜಾವದಲ್ಲಿ ಸ್ವಲ್ಪ ನಿದ್ರೆ ಹತ್ತಿದಂತಾಗಲು, ಆಗ ಆಕೆಗೆ ಒಂದು ಕನಸಾಯಿತು.

ಆ ಸ್ವಪ್ನದಲ್ಲಿ ಒಬ್ಬ ಜಂಗಮಾರ್ಯನು ಆಕೆಯ ದೃಷ್ಟಿಗೆ ಗೋಚರ ನಾದನು. ಆತನು ವಿಭೂತಿ ರುದ್ರಾಕ್ಷಮಾಲೆಗಳಿಂದಲೂ, ಕಾವಿಯ ಉಡಿಗೆ ಯಿಂದಲೂ ಒಪ್ಪುತ್ತಿದ್ದಾನೆ. ದೇವಾಜಾಂಬೆಯು, ಸಾಕ್ಷಾತ್ಪರಶಿವನಂತೆ ಕಾಣಿಸಿದ ಆತನನ್ನು ಕಂಡೊಡನೆಯೇ ಕನಸಿನಲ್ಲೇ ಇದಿರೆದ್ದು ಪೀಠವಿತ್ತು ಗೌರವಿಸಿ ಫಲಾದಿಗಳನ್ನು ಸಮರ್ಪಿಸಿದ್ದಾಳೆ. ಆಗ ಆತನು, ಪ್ರಸನ್ನಮುಖ ದಿಂದ ಆಕೆಯನ್ನು ಕುರಿತು "ತಾಯೇ! ಇನ್ನು ನೀವು ಚಿಂತಿಸಬೇಡಿ, ನಿಮ್ಮ ಈ ಕಷ್ಟವು ಭಗವಾನ್ ಶಂಕರಮೂರ್ತಿಗೆ ಅರಿಕೆಯಾಗಿ ಆತನು ಅನುಗ್ರಹ ಮಾಡಿದ್ದಾನೆ. ಇನ್ನು, ನಿಮ್ಮ ಈ ದುಃಖಸಮುದ್ರವು ಬತ್ತಿತ್ತೆಂದು ತಿಳಿಯಿರಿ. ದ್ವಾರಕಾ ನಗರಿಯ ಕಡೆಯಿಂದ ರಾಜಪುತ್ರರಿಬ್ಬರು ಭಗವತೀ ಚಾಮುಂ ಡಾಂಬಿಕೆಯ ಆಜ್ಞಾನುಸಾರ ಈ ಪಟ್ಟಣಕ್ಕೆ ಬಂದಿದ್ದಾರೆ. ಅವರನ್ನು ಅರಮನೆಗೆ ಬರಮಾಡಿಕೊಂಡು ಅವರೊಂದಿಗೆ ಸಂಧಾನ ನಡೆಯಿಸಿರಿ. ಮಹಾ ವೀರರೂ ತೇಜಸ್ವಿಗಳೂ ಆದ ಆ ರಾಜಪುತ್ರರು ಈ ದುರುಳನನ್ನು ವಧಿಸಿ

ನಿಮ್ಮ ಪೀಡೆಯನ್ನು ನೀಗಿಸುವರು; ಅವರಿಂದ ನಿಮ್ಮ ವಂಶವೂ ಉದ್ಧಾರ ವಾಗುವುದು; ಚಿಂತಿಸಬೇಡಿ" ಎಂದು ನುಡಿದು ಕಣ್ಮರೆಯಾದನು.

ಮಹಾರಾಣಿಗೆ ತಟ್ಟನೆ ಎಚ್ಚರವಾಯಿತು! ಅತ್ತಿತ್ತ ನೋಡಲು ಯಾವ ಜಂಗಮನೂ ಕಾಣಲಿಲ್ಲ; ಇನ್ನೂ ಚೆನ್ನಾಗಿ ಬೆಳಕಾಗಿರಲಿಲ್ಲವಾದ್ದ ರಿಂದ ಅಂತಹ ಆವೇಳೆಯಲ್ಲಿ ಅಲ್ಲಿಗೆ ಯಾರೂ ಬಂದಿರಲಾರರೆಂದೂ ಅದು ಕನಸೇ ಎಂದೂ ನಿರ್ಧರಿಸಿದಳು. ಅದರಲ್ಲಿ ಆ ಸಾಧುಪುರುಷನು ಹೇಳಿದ ಒಂದೊಂದು ಮಾತನ್ನೂ ಮತ್ತೆಮತ್ತೆ ಮನಸ್ಸಿಗೆ ತಂದುಕೊಂಡು ಪರಿಭಾವಿಸಿ ದಳು. ಮನಸ್ಸು ಆಶಾಭರಿತವಾಯಿತು; ಚಿಂತೆಯ ಮಬ್ಬು ಹಾರಿತು, ತನ್ನ ಮಗಳು ದೈತ್ಯಸದೃಶನಾದ ಆ ತೊರೆಯನ ಪಾಲಿನ ತುತ್ತಾಗುವುದಿಲ್ಲವೆಂಬ ಭರವಸೆಯುಂಟಾದ್ದರಿಂದ ತಾನು ಪುಣ್ಯಶಾಲಿನಿಯೆಂದುಕೊಂಡಳು. ಕೂಡಲೇ ಮಗಳನ್ನೆಬ್ಬಿಸಿ ಆಕೆಗೂ ಆ ಸಂತೋಷ ಸಮಾಚಾರವನ್ನು ತಿಳಿಸಿದಳು.

"ಅಮ್ಮಾ! ಮನಸ್ಸಿನ ಕಳವಳವೇ ಕನಸಾಗಿ ತೋರಿದೆಯಲ್ಲದೆ ನಾವಂತಹ ಅದೃಷ್ಟಶಾಲಿಗಳೇ?" ಎಂದು ರಾಜಪುತ್ರಿಯು ನಿಟ್ಟುಸಿರು ಬಿಟ್ಟಳು. ಆಗಲಾ ರಾಜಪತ್ನಿಯು, "ಮಗಳೇ ನಿರಾಸೆಗೊಳ್ಳಬೇಡ; ಮನುಷ್ಯ ಜನ್ಮದಲ್ಲಿ ಸುಖ ದುಃಖಗಳು ಹಗಲು ರಾತ್ರಿಗಳಂತೆ ಒಂದಾದ ಮೇಲೊಂದು ಬರುವುದು ತಪ್ಪದು. ನಾವು ಬೇಕೆಂದು ಕೇಳಿಕೊಳ್ಳದ ಈ ಕಷ್ಟವು ಹೇಗೆ ಬಂದಿದೆಯೋ ಇದರ ಪರಿಹಾರವೂ ಹಾಗೆಯೇ ಆಗುವುದು. ಮುಂಬೆಳಗಿನ ಕನಸು ವ್ಯರ್ಥವಾಗುವುದಿಲ್ಲವೆಂದು ಹಿರಿಯರು ಹೇಳುತ್ತಾರೆ. ನನಗೆ ರಾತ್ರಿ ಯಲ್ಲಾದ ಶುಭ ಶಕುನಕ್ಕೆ ಈ ಕನಸೇ ಉದಾಹರಣೆ; ಮುಂದೇನಾಗುವು ದೆಂದೂ ನೋಡೋಣ" ಎಂದು ಸಮಾಧಾನಗೊಳಿಸಿ ಧೈರ್ಯ ಹೇಳಿದಳು.

ಕನಸಿನಲ್ಲಿ ತಾನು ಕೇಳಿದ "ರಾಜಪುತ್ರರಿಬ್ಬರು ಭಗವತೀ ಚಾಮುಂ ಡಾಂಬಿಕೆಯ ಆಜ್ಞಾನುಸಾರ ಈ ಪಟ್ಟಣಕ್ಕೆ ಬಂದಿದ್ದಾರೆ" ಎಂಬ ವಾಕ್ಯವು ಆಕೆಯ ನಂಬಿಕೆಯನ್ನು ಗಳಿಗೆ ಗಳಿಗೆಗೂ ಹೆಚ್ಚಿಸುತ್ತಿತ್ತು. ಅವರು ಯಾರೋ? ಎಲ್ಲಿ ಬಂದು ತಂಗಿದ್ದಾರೋ? ಅವರು ಇಂಥವರೇ ಎಂದು ಕಂಡುಹಿಡಿಯು ವುದು ಹೇಗೆ? ಎಂದು ಯೋಚಿಸುತ್ತ ದೇವಾಜಮ್ಮಣ್ಣಿಯು "ಭಗವತಿಯು ಮಾಡಿಸಿದಂತಾಗಲಿ" ಎಂದು ಧೈರ್ಯವಾಗಿದ್ದು ಬಿಟ್ಟಳು.

---

# ೨ ವಿಂಧ್ಯಗಿರಿ ಶಿಖರದಿಂದ ಮಹಾಬಲಾದ್ರಿಗೆ

ವಿಂಧ್ಯಪರ್ವತದ ಸಾಲಿನ ಒಂದಾನೊಂದು ಗಿರಿಯನ್ನು ಇಬ್ಬರು ತರುಣರು ಹತ್ತಿಹೋಗುತ್ತಿದ್ದಾರೆ. ಮಧ್ಯಾಹ್ನಕಾಲ: ಸೂರ್ಯನು ನಡು ನೆತ್ತಿಯಲ್ಲಿ ಜಾಜ್ವಲ್ಯಮಾನವಾಗಿ ಬೆಳಗುತ್ತಿದ್ದಾನೆ. ಗಿರಿಯ ಕರಿಯ ಕಲ್ಲು ಬಂಡೆಗಳೆಲ್ಲ ಕಾಯ್ದುಹೋಗಿವೆ. ಪಕ್ಕದಲ್ಲೇ ಬೆಂಕಿಯ ರಾಶಿ ಇದ್ದಂತೆ ಝಳ ಹೊಡೆಯುತ್ತಿದೆ. ಕೆಳಗೆ ನೆಲ ಸುಡುತ್ತಿದೆ, ಮೇಲೆ ನೆತ್ತಿ ಸುಡುತ್ತಿದೆ. ಪಾಪ! ಆ ತರುಣರಿಬ್ಬರೂ ಬಾಯಾರಿಕೆಯಿಂದ ಕಂಗೆಟ್ಟು ಎಲ್ಲಿಯಾದರೂ ಸ್ವಲ್ಪನೀರು ಸಿಕ್ಕೀತೇ ಎಂದು ಹುಡುಕಿಕೊಂಡು ಆ ನಿರ್ಮಾನುಷ ಗಿರಿಯನ್ನು ಏರಿಹೋಗುತ್ತಿದ್ದಾರೆ.

ಸ್ವಲ್ಪ ಮೇಲೇರಿ ಹೋಗುವುದರೊಳಗಾಗಿ ಬೆಟ್ಟದ ಮೇಲಿದ್ದ ದೇವಸ್ಥಾನವೊಂದು ಅವರಿಗೆ ಗೋಚರವಾಯಿತು ; ಅದರ ಪಕ್ಕದಲ್ಲೇ ಒಂದು ಮರ ವಿದ್ದುದೂ ಕಾಣಿಸಿತು. ಅದನ್ನು ನೋಡಿ ಅವರಲ್ಲಿ ಹಿರಿಯನು, “ತಮ್ಮಾ! ಅಗೋ ಅಲ್ಲಿ ನೋಡು, ಗಿರಿಶಿಖರದಲ್ಲಿ ದೇವಾಲಯವೊಂದು ಕಾಣಿಸುತ್ತಿದೆ! ಅದರ ಪಕ್ಕದಲ್ಲೇ ಒಂದು ಕೊಳವೂ ಇರಬಹುದು. ಅಲ್ಲಿಯವರೆಗೆ ಕಷ್ಟಪಟ್ಟು ಹತ್ತಿಹೋಗೋಣ. ಅಲ್ಲಿ ನೀರು ಕುಡಿದು ನೆಳಲಲ್ಲಿ ವಿಶ್ರಮಿಸಿಕೊಳ್ಳಬಹುದು” ಎಂದು ಉತ್ತೇಜಕವಾಗಿ ಹೇಳಿದನು. ಬೆಟ್ಟವನ್ನು ಹತ್ತಿಹೋದರೆ, ಅಲ್ಲಿ ನೀರು ಕುಡಿಯಬಹುದಲ್ಲಾ ಎಂಬ ಆಸೆಯು ಅವರನ್ನು ಹೆಜ್ಜೆ ಹೆಜ್ಜೆಯಾಗಿ ಮೇಲಕ್ಕೆ ಕರೆದೊಯ್ದಿತು.

ಅವರು ಎಲ್ಲೋ ಬಹು ದೂರದಿಂದ ನಡೆದು ಬಂದಿರುವಂತೆ ಕಾಣುತ್ತಿದೆ. ತರುಣರಿಬ್ಬರೂ ಯುದ್ಧವೀರರಿಗೆ ಒಪ್ಪುವಂತಹ ಉಡಿಗೆಗಳನ್ನು ಉಟ್ಟಿದ್ದಾರೆ; ನಡುವಿನಿಂದ ಕತ್ತಿಯ ಒರೆಗಳು ನೇತಾಡುತ್ತಿವೆ. ಎಡಗೈಯಲ್ಲಿ ಶತ್ರುಭಯಂಕರವಾದ ಬಿಲ್ಲೂ, ಬೆನ್ನಿನಲ್ಲಿ ಬತ್ತಳಿಕೆಯೂ ಇವೆ; ಕೈಗಳಲ್ಲಿ ಭಲ್ಲೆಗಳು. ವಯಸ್ಸು ಇಪ್ಪತ್ತೈದು ಮೂವತ್ತರೊಳಗೆ. ಆಜಾನುಬಾಹುಗಳು, ದೃಢಕಾಯರು.

ಸ್ವಲ್ಪ ಹೊತ್ತಿನಲ್ಲೇ ಬೆಟ್ಟವನ್ನು ಏರಿ ಶಿಖರವನ್ನು ಸೇರಿದ್ದಾಯಿತು. ಅಲ್ಲಿ ಒಂದು ದೇವಾಲಯ; ಪಕ್ಕದಲ್ಲೇ ಚಿಕ್ಕದೊಂದು ಪುಷ್ಕರಣಿ; ಅದರಲ್ಲಿ

ಸ್ಫಟಿಕದಂತಹ ತಿಳಿನೀರು. ಆ ನೀರನ್ನು ಕಂಡೊಡನೆಯೇ ಇಬ್ಬರೂ ಜೀವನದ ಸರ್ವಸ್ವವನ್ನೂ ಪಡೆದಂತೆ, ಆನಂದದಿಂದ ಅದರ ಬಳಿಗೆ ಧಾವಿಸಿ ಮನಸಾರೆ ಜಲಪಾನಮಾಡಿದರು. ಸ್ವಲ್ಪ ಹೊತ್ತು ನೀರ ಬಳಿಯ ಮೆಟ್ಟಿಲ ಮೇಲೆಯೇ ಕುಳಿತು ಕಾಲುಗಳನ್ನು ನೀರಲ್ಲಿಳಿಯಬಿಟ್ಟು ದಣುವಾರಿಸಿಕೊಂಡರು. ಬಳಿಕ ಮೇಲಕ್ಕೆ ಹತ್ತಿಬಂದು ಆಯುಧಗಳನ್ನು ಹೊರಗಿಟ್ಟು ದೇವಸ್ಥಾನದ ಒಳ ಹೊಕ್ಕರು.

ಗರ್ಭಗುಡಿಯಲ್ಲಿ ಸಿಂಹವಾಹಿನಿಯಾದ ಅಂಬಿಕಾಮೂರ್ತಿ; ಮನೋಹರವಾದ ಕೃಷ್ಣಶಿಲೆಯ ವಿಗ್ರಹ. ದೈತ್ಯರ ವಧೆಗಾಗಿ ಷೋಡಶ ಹಸ್ತಗಳಲ್ಲೂ ಬಗೆ ಬಗೆಯ ಭಯಂಕರ ಆಯುಧಗಳನ್ನು ಧರಿಸಿದ್ದಾಳೆ. ದೇವಿಯ ಮೂರ್ತಿಯು ಅವಡುಗಚ್ಚಿ ರೋಷಾಕ್ರಾಂತಳಾಗಿ ಶತ್ರುಸಂಹಾರ ಕಾರ್ಯದಲ್ಲಿ ತೊಡಗಿರುವಂತೆ ಕಾಣುತ್ತಿದೆ. ದೇವಿಯನ್ನು ಕಂಡೊಡನೆಯೇ ಸೋದರರಿಬ್ಬರೂ ಭಯಭಕ್ತಿಗಳಿಂದ ಅಡ್ಡಬಿದ್ದು, ಎದ್ದು ಕೈಜೋಡಿಸಿ ನಿಂತರು.

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿ ಧ್ಯಾನಮಾಡಿದರು. ಆಗ ಯದುರಾಯನು "ತಾಯೇ! ಮಹಾ ಮಾಯೆ! ಭವತಾರಿಣಿಯಾದ ನೀನು ನಮ್ಮನ್ನು ಮರೆತೆಯಾ? ಕೈಬಿಟ್ಟೆಯಾ? ಭಾರತದೇಶವನ್ನು ಯವನರಿಗೂ ಮ್ಲೇಛರಿಗೂ ಮಾಸಲಾಗಿಡಲು ಸಂಕಲ್ಪಿಸಿದ್ದೀಯಾ? ನಮ್ಮದು ಇನ್ನೆಂತಹ ದುರ್ದೈವವಿದ್ದೀತು? ದೇಶದ ಮಹಾ ಪ್ರಸಿದ್ಧವಾದ ರಾಜವಂಶಗಳೆಲ್ಲವೂ ಹೇಳ ಹೆಸರಿಲ್ಲದಂತಾಗಿ, ರಾಜ್ಯಗಳು ಒಂದೊಂದೇ ಅವರ ವಶವಾಗುತ್ತಿವೆಯಲ್ಲಾ! ನಮ್ಮ ರಾಜ್ಯಹೋಯಿತು; ಭಂಡಾರವು ಅವರ ಸ್ವಾಧೀನವಾಯಿತು; ಸೈನ್ಯ ನಾಶವಾಯಿತು; ಬಂಧುಬಳಗದವರೆಲ್ಲ ದಿಕ್ಕಿಗೊಬ್ಬರಂತೆ ಚೆದರಿಹೋದರು. ಇದಂತಿರಲಿ, ಭಾರತದೇಶದ ಧರ್ಮವೇ ನಷ್ಟವಾಗುತ್ತಿದೆ; ವರ್ಣಾಶ್ರಮಧರ್ಮಗಳು ನಾಶವಾಗುತ್ತಿವೆ. ಹಾ ವಿಧಿಯೇ! ತಾಯೇ! ಈ ಭಯಂಕರವಾದ ಪರಿತಾಪಕರ ಸ್ಥಿತಿಯು ನಿನಗೆ ಅರಿಕೆಯಿಲ್ಲವೆ? ಲೋಕಮಾತೆಯಾದ ನೀನೂ ನಮ್ಮನ್ನು ಕೈಬಿಟ್ಟರೆ ನಾವಿನ್ನು ಅನಾಥರಾದೆವಲ್ಲಾ! ದೀನರಾದ ನಮ್ಮನ್ನು, ಒಮ್ಮೆ ಕಣ್ದೆರೆದು ಏಕೆ ನೋಡಲೊಲ್ಲೆ?" ಎಂದು ಕೈಮುಗಿದು ಬೇಡಿಕೊಂಡನು.

ತಮ್ಮನಾದ ಕೃಷ್ಣರಾಯನು ತನ್ನ ಒರೆಯಲ್ಲಿನ ಖಡ್ಗವನ್ನು ಹಿರಿದು ದೇವಿಯ ಎದುರಿಗೆ ಅಡ್ಡವಾಗಿಟ್ಟು "ಅಮ್ಮಾ! ಪುರಾತನವಾದ ನಮ್ಮ ಈ ವಂಶದ ಮೇಲೂ ನಿನಗೆ ಕನಿಕರವಿಲ್ಲವೆ? ಶ್ರೀಹರಿಯು ಕೃಷ್ಣಾವತಾರವನ್ನೆತ್ತಲು ಆರಿಸಿಕೊಂಡುದು ನಮ್ಮ ಈ ಪವಿತ್ರ ಯಾದವ ವಂಶವನ್ನೇ ಅಲ್ಲವೆ? ಆಗ ಮಹಾತಾಯಿ! ನೀನೂ ಆತನಿಗೆ ತಂಗಿಯಾಗಿ ಅವತರಿಸಿ ಆ ದುರುಳ ಕಂಸನ ಸಂಹಾರಕ್ಕೆ ಸಹಕಾರಿಯಾದುದನ್ನು ಮರೆತೆಯಾ? ನೀನೇ ಅವತರಿಸಿದ ಈ ವಂಶದಲ್ಲಿ ಅಳಿದುಳಿದ ಈ ಇಬ್ಬರು ಅಣುಗರಮೇಲೆ ನಿನ್ನ ಕೃಪಾವರ್ಷವನ್ನು ಸುರಿಸಿ ಉದ್ಧರಿಸಲಾರೆಯಾ? ನೀನು ಹಾಗೆ ಪ್ರಸನ್ನಳಾಗಿ ಉದ್ಧಾರಕ ಮಾರ್ಗವನ್ನು ತೋರಿಸಿಕೊಡದಿದ್ದರೆ, ತಾಯೇ! ಇಗೋ! ಈ ಕತ್ತಿಯಿಂದ ನಮ್ಮ ಕೊರಳನ್ನಾದರೂ ಛೇದಿಸಿಬಿಡು. ಅಮ್ಮಾ! ನಮ್ಮ ಯಾವ ತಪ್ಪಿಗಾಗಿ ನೀನು ಪ್ರಸನ್ನಳಾಗಲೊಲ್ಲೆ!" ಎಂದು ಪರಿಪರಿಯಿಂದ ಬೇಡಿಕೊಂಡನು.

ಬಳಿಕ ಇಬ್ಬರೂ ದೇವಿಗೆ ಮತ್ತೊಮ್ಮೆ ನಮಸ್ಕರಿಸಿದರು. ದೇವಾಲಯದಿಂದ ಹೊರಹೊರಟು ನಡೆದು, ಪಕ್ಕದ ಮರದ ನೆರಳಿನಲ್ಲೇ ನೀಲವಾದ ಆಕಾಶವನ್ನು ನೋಡುತ್ತ ಮಲಗಿ ವಿಶ್ರಮಿಸಿಕೊಂಡರು.

ಆಯಾಸಗೊಂಡು ಬಂದಿದ್ದ ಅವರಿಗೆ ಒಡನೆಯೇ ಗಾಢನಿದ್ದೆ ಹತ್ತಿತು. ಹಾಗೆಯೇ ಒಂದೆರಡು ಗಂಟೆಗಳ ಕಾಲ ನಿದ್ದೆಯಾಯಿತು. ರಾಜಪುತ್ರರು ಮೈ ತಿಳಿಯದೆ ಮಲಗಿದ್ದಾರೆ. ಆಗ ಅವರಲ್ಲಿ ಹಿರಿಯನಾದ ಯದುರಾಯನಿಗೆ ಒಂದು ಕನಸು ಬಿದ್ದಿತು. ಅದರಲ್ಲಿ ಆತನು ದಿವ್ಯಮಂಗಳಾಕಾರಳಾದ ಒಬ್ಬ ಮುತ್ತೈದೆಯನ್ನು ಕಾಣುತ್ತಿದ್ದಾನೆ; ಹಣೆಯಲ್ಲಿ ಢಾಳಾಗಿ ಹಚ್ಚಿದ ದಿವ್ಯ ಮಂಗಳಕರ ಕುಂಕುಮ; ಹಸನ್ಮುಖ; ಕೈಯಲ್ಲಿ ಪೂಜಾಸಾಮಗ್ರಿಗಳು; ಆ ಸುಮಂಗಲೆಯ ಭವ್ಯ ಸ್ವರೂಪವನ್ನು ಕಂಡೊಡನೆಯೇ, ರಾಜಪುತ್ರನು ಆಕೆಯ ತೇಜಸ್ವಿತೆಗೆ ಕೈಜೋಡಿಸಿ ವಂದಿಸಿದನು. ಆಗಲಾ ಮಂಗಳಾಂಗಿಯು ಮೃದುಮಧುರ ಸುಸ್ವರದಿಂದ, "ರಾಜಪುತ್ರಾ! ಇನ್ನು ನಿನ್ನ ಮನಸ್ಸಿನ ಈ ದುಗುಡವನ್ನು ಬಿಡು; ನಿಮ್ಮ ಕಷ್ಟದ ದಿನಗಳು ಮುಗಿಯುತ್ತ ಬಂದಿವೆ; ಇನ್ನು ಕೆಲವೇ ದಿನಗಳಲ್ಲಿ ನಿಮ್ಮ ಸೌಭಾಗ್ಯಸೂರ್ಯನು ಉದಯಹೊಂದುವನು; ಇಲ್ಲಿಂದ ಹೊರಟು ನೀವು ದಕ್ಷಿಣ ದಿಕ್ಕನ್ನು ಅನುಸರಿಸಿ ಪ್ರಯಾಣ ಮಾಡಿರಿ; ಕೃಷ್ಣಾ ತುಂಗಭದ್ರಾ ನದಿಗಳನ್ನು ದಾಟಿ, ಮುಂದೆ ಹೋಗಿರಿ.

ಅಲ್ಲಿ ದಕ್ಷಿಣಗಂಗಾ ಎಂಬ ದಿವ್ಯನಾಮದಿಂದ ಕಂಗೊಳಿಸುತ್ತಿರುವ ಕಾವೇರಿ ಯೆಂಬ ದಿವ್ಯ ನದಿಯೊಂದು ಹರಿಯುತ್ತಿರುವುದು; ಅದನ್ನೂ ದಾಟಿ ಮುಂದೆ ಹೋಗಿರಿ; ಸ್ವಲ್ಪದೂರದಲ್ಲೇ ಮಹಾಬಲಾದ್ರಿ ಎಂಬೊಂದು ಗಿರಿಶಿಖರವನ್ನು ಕಾಣುವಿರಿ. ಅಲ್ಲಿ ನಾನು ಚಾಮುಂಡಾಂಬಿಕೆಯೆಂಬ ಹೆಸರಿನಿಂದ ಮಹಿಷಾ ಸುರ ಮರ್ದಿನಿಯಾಗಿ ನೆಲಸಿದ್ದೇನೆ. ಅಲ್ಲಿ ಆ ದೇವತೆಯನ್ನು ಆರಾಧಿಸಿರಿ; ನಿಮ್ಮ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. ಆ ಗಿರಿಯ ಪಕ್ಕದಲ್ಲೇ ಮಹಿಸೂರೆಂಬ ಪಟ್ಟಣವೊಂದಿರುವುದು. ಆ ರಾಜ್ಯವೂ ನಿಮ್ಮ ಸ್ವಾಧೀನ ವಾಗುವುದು. ನಿಮ್ಮ ವಂಶವು ಮುಂದೆ ಸುಪ್ರಸಿದ್ಧವೆನಿಸಿ ಅಭಿವೃದ್ಧಿಗೊಳ್ಳು ವುದು. ರಾಜಪುತ್ರಾ! ವ್ಯಸನಪಡಬೇಡ; ನನ್ನೀ ನುಡಿಯಲ್ಲಿ ಸಂದೇಹ ಗೊಳ್ಳಬೇಡ; ನಾನು ಈ ಗಿರಿಯ ಅಧಿಷ್ಠಾತ್ರೀ ದೇವತೆಯೆಂದು ತಿಳಿ. ಇನ್ನು ಹೊರಡಿ; ನಿಮಗೆ ಮಂಗಳವಾಗಲಿ" ಎಂದು ನುಡಿದು ಉತ್ತರಕ್ಷಣದಲ್ಲೇ ಅದೃಶ್ಯಳಾದಳು.

ಆವರೆಗೂ ಎದುರಿಗೆ ನಿಂತು ಮಾತನಾಡುತ್ತಿದ್ದ ಆ ಮಂಗಳಕರ ವಿಗ್ರಹವು ಅದೃಶ್ಯವಾದೊಡನೆಯೇ ಯದುರಾಯನಿಗೆ ತಟ್ಟನೆ ಎಚ್ಚರ ವಾಯಿತು. ಎದ್ದು ಕುಳಿತು ಸುತ್ತಲೂ ನೋಡಿದನು; ಯಾರೂ ಇಲ್ಲ; ತಮ್ಮನು ಇನ್ನೂ ಗಾಢನಿದ್ರೆಯಲ್ಲಿ ಮಲಗಿದ್ದಾನೆ. ಆವರೆಗೆ ಮನಸ್ಸಿನಲ್ಲಿದ್ದ ಕಳವಳವೆಲ್ಲ ಪರಿಹಾರವಾಗಿ ಮನಸ್ಸು ಸುಪ್ರಸನ್ನವಾಗಿದೆ; ಅಂತಃಕರಣದಲ್ಲಿ ಧೈರ್ಯೋತ್ಸಾಹಗಳೂ ಮಹದಾಶಯ ಆಕಾಂಕ್ಷೆಗಳೂ ಉಕ್ಕುತ್ತಿವೆ; ಸ್ವಪ್ನ ವಿಚಾರವನ್ನೂ ದೇವಿಯು ನುಡಿದ ಮಾತುಗಳನ್ನೂ ಒಂದೊಂದನ್ನಾಗಿ ಜ್ಞಾಪಿಸಿಕೊಳ್ಳುತ್ತಿದ್ದಾನೆ; ಜ್ಞಾಪಿಸಿಕೊಂಡಂತೆಲ್ಲ ಆನಂದಬಾಷ್ಪವು ಸುರಿ ಯುತ್ತಿದೆ; ಮೈ ರೋಮಾಂಚವಾಗುತ್ತಿದೆ; ಅದರಿಂದುಂಟಾದ ಆನಂದೋ ದ್ರೇಕವನ್ನು ಮನಸ್ಸಿನಲ್ಲಿ ತಡೆದಿಟ್ಟುಕೊಳ್ಳುವುದು ಅಸಾಧ್ಯವೆನ್ನಿಸಿತು.

ಮಲಗಿದ್ದ ಕೃಷ್ಣರಾಯನನ್ನು ಕುರಿತು, "ತಮ್ಮಾ! ಏಳು ಏಳು" ಎಂದು ಎಬ್ಬಿಸಿದನು. "ಕೇಳು! ಈಗ ನನಗೊಂದು ಕನಸಾಯಿತು. ಅದರಲ್ಲಿ ದೇವಿಯೇ ಪ್ರತ್ಯಕ್ಷಳಾಗಿ ಬಂದು ನಾವು ದಕ್ಷಿಣದೇಶದ ಕಾವೇರೀ ತೀರಕ್ಕೆ ಹೋಗಿ, ಅಲ್ಲೇ ಮಹಾಬಲಾದ್ರಿಯಲ್ಲಿರುವ ಶ್ರೀ ಚಾಮುಂಡೇಶ್ವರೀ ಅಮ್ಮ ನವರನ್ನು ಸಂದರ್ಶಿಸಬೇಕೆಂದು ಆಜ್ಞಾಪಿಸಿದ್ದಾಳೆ. ಮಗೂ! ಇನ್ನು ಏಳು

ಹೊರಡೋಣ; ದೇವಿಯ ಮಹದಾಜ್ಞೆ!" ಎಂದು ನುಡಿದನು. ಆ ಮಾತನ್ನು ಕೇಳಿದ ಕೃಷ್ಣರಾಯನಿಗೂ ವಿಶೇಷ ಉತ್ಸಾಹವುಂಟಾಯಿತು. ಪುನಃ ಅವರು ದೇವಸ್ಥಾನದೊಳಕ್ಕೆ ಹೋಗಿ ದೇವಿಯ ದಿವ್ಯ ಮಂಗಳ ಮೂರ್ತಿಯನ್ನು ಮನಸ್ಸಿಗೆ ತೃಪ್ತಿತೋರುವವರೆಗೂ ನೋಡಿದರು; ಆನಂದಬಾಷ್ಪಗಳು ಕಣ್ಣಿನಿಂದ ಧಾರೆ ಧಾರೆಯಾಗಿ ಸುರಿದುವು. ಬಳಿಕ ಬೆಟ್ಟವನ್ನಿಳಿದು ಇಬ್ಬರೂ ದಕ್ಷಿಣಾ ಪಥವನ್ನು ಹಿಡಿದು ಪ್ರಯಾಣಮಾಡಿದರು

ಹಳ್ಳಕೊಳ್ಳಗಳೆನ್ನದೆ, ಕಲ್ಲುಮುಳ್ಳುಗಳೆನ್ನದೆ, ಗಿರಿಯೆನ್ನದೆ, ಕಾನನವೆನ್ನದೆ ಪ್ರಯಾಣಮಾಡುತ್ತ ಸಾಗಿದ ಆ ತರುಣರು, ತುಂಗಭದ್ರಾನದಿಯ ದಡವನ್ನು ಸೇರಿ, ಹಂಪೆಯಲ್ಲಿ ಶ್ರೀವಿರೂಪಾಕ್ಷಸ್ವಾಮಿಯ ದರ್ಶನಮಾಡಿದರು. ವಿಜಯನಗರ ಸಾಮ್ರಾಜ್ಯದ ವೈಭವವು ಅವರಿಗೆ ನೇತ್ರಾನಂದವನ್ನುಂಟು ಮಾಡಿತು. ಕರ್ಣಾಟಕ ಸಾಮ್ರಾಜ್ಯ ರಮಾರಮಣರ ಐಶ್ವರ್ಯಪ್ರತಾಪಗಳು ಅವರನ್ನು ತಲೆದೂಗಿಸಿದುವು. ಹೀಗೆ ಕೆಲವು ದಿನಗಳ ಪ್ರಯಾಣ ಸಾಗಿದ ಮೇಲೆ, ಅವರು ಯಾದವಾದ್ರಿ ಎಂಬೊಂದು ಪುಣ್ಯಕ್ಷೇತ್ರವನ್ನು ಕಂಡರು. ಯಾದವಗಿರಿಯು ಚೆಲುವರಾಯ ಸ್ವಾಮಿಯ ಸಾನ್ನಿಧ್ಯದಿಂದ ಪಾವನವೆನಿಸಿದ ಪುಣ್ಯಕ್ಷೇತ್ರ. ರಾಜಪುತ್ರರು ಭಕ್ತಾಭೀಷ್ಟ ವರಪ್ರದನಾದ ಆ ಸ್ವಾಮಿಯನ್ನು ಪೂಜಿಸಿ, ಪ್ರಸಾದವನ್ನು ಸ್ವೀಕರಿಸಿ, ಮುಂದೆ ಮಹಾಬಲಾದ್ರಿಗಾಗಿ ಪ್ರಯಾಣ ಬೆಳಸಿದರು.

ಮಾರ್ಗಮಧ್ಯದಲ್ಲೇ ಅವರಿಗೆ ಒಂದು ದಿವ್ಯನದಿಯ ದರ್ಶನವಾಯಿತು; ಅದೇ ಕಾವೇರಿ. ಕೊಡಗಿನ ಗಿರಿಶಿಖರದಲ್ಲಿ ಹುಟ್ಟಿ, ತನ್ನ ನಿರ್ಮಲ ಜಲದಿಂದ ತಾನು ಪ್ರವಹಿಸುವ ನಾಡನ್ನೆಲ್ಲ ಸಂಪತ್ತು ಸಮೃದ್ಧಿಗಳಿಂದ ಬೆಳಗುವಂತೆ ಮಾಡುತ್ತ, ದೇವನದಿಯಂತೆ ತುಷ್ಟಿ ಪುಷ್ಟಿಗಳನ್ನೂ ಭುಕ್ತಿಮುಕ್ತಿಗಳನ್ನೂ ಕೊಡುತ್ತ, ಜೀವಕೋಟಿಗೆ ಪ್ರಾಣದಾನ ಮಾಡುತ್ತಿರುವ ಆ ಕವೇರಪುತ್ರಿಯ ಮಹಿಮೆಯನ್ನು ವರ್ಣಿಸಬಲ್ಲವನಾರು? ಆ ಪುಣ್ಯನದೀ ಜಲದಲ್ಲಿರುವ ರಸಪುಷ್ಟಿ ಎಷ್ಟುಮಟ್ಟಿನದೋ! ಜೀವಕೋಟಿಯ ಮತ್ತು ಪೈರುಪಚ್ಚೆಯ ಬೆಳವಣಿಗೆಗೆ ಮಾತ್ರವಲ್ಲ; ಮನುಷ್ಯನ ಬುದ್ಧಿಶಕ್ತಿಯು ಓಡಿದಂತೆಲ್ಲ-ಧ್ರುವಜಲ ಪ್ರವಾಹವುಳ್ಳ ಆ ನದಿಯ ನೀರನ್ನು ಬಳಸಿ, ಭೌತಿಕ ಸುಖ ಸಂಪತ್ತುಗಳನ್ನೂ ಆಧ್ಯಾತ್ಮಿಕ ಅಭಿವೃದ್ಧಿಯನ್ನೂ ಗಳಿಸಿಕೊಳ್ಳಲು ಆ ನದಿಯ ಪವಿತ್ರಜಲವು

ಪರಮಸಾಧಕವಾಗಿರುವುದು. ಆ ಮಹಾತಾಯಿ ಕಾವೇರಿಯು ಜಗತ್ತಿನ ಜನರನ್ನು ಕುರಿತು, "ಎಲೈ ಮಾನವರೇ! ಸಂತತವಾಗಿ ಕಷ್ಟಪಡದೆ ಸುಖವು ಎಂದಾದರೂ ಯಾರಿಗಾದರೂ ಸಾಧ್ಯವಾದುದುಂಟೇ? ದೇವತೆಗಳು ಸಹ ದಾನವರೊಂದಿಗೆ ಸ್ನೇಹಮಾಡಿ ಅವರ ದೇಹಬಲದ ಸಹಕಾರದಿಂದ ಮಂದರ ವನ್ನು ಸಿಂಧುವಿನಲ್ಲಿಟ್ಟು ಕಡೆದು ಶ್ರಮಪಟ್ಟ ಮೇಲಲ್ಲವೆ ಅಮೃತವು ದೊರಕಿ ದುದು? ಹಾಗೆಯೇ, ನನ್ನಲ್ಲಿ ಅವಿಚ್ಛಿನ್ನವಾಗಿ ಪ್ರವಹಿಸುತ್ತಿರುವ ಈ ಜಲ ವನ್ನು ನಿಮ್ಮ ಬುದ್ಧಿಶಕ್ತಿಯಿಂದ ನೀವು ಹೇಗೆ ಹೇಗೆ ಬಳಸಿ ಉಪಯೋಗ ಪಡಿಸಿಕೊಳ್ಳುವಿರೋ ಹಾಗೆಯೇ ನಾನೂ ನಿಮ್ಮ ಸಂಪತ್ತು, ಸೌಭಾಗ್ಯಗಳನ್ನು ಅಭಿವೃದ್ಧಿಗೊಳಿಸುತ್ತ ಪೋಷಿಸುವೆನು" ಎಂದು ಹೇಳುತ್ತಿರುವಳೋ ಎಂಬಂತೆ ಇರುವುದು ಆ ದಿವ್ಯನದೀ ಪ್ರವಾಹವು!

ರಾಜಪುತ್ರರಿಬ್ಬರೂ ಆ ಪುಣ್ಯನದಿಯನ್ನು ಕಂಡು ಪರಮಾನಂದದಿಂದ ಅದರಲ್ಲಿಳಿದು ಸ್ನಾನಸಂಧ್ಯಾದಿಗಳನ್ನು ಆಚರಿಸಿದರು; ಸೂರ್ಯನಾರಾಯಣ ನನ್ನು ಆರಾಧಿಸಿದರು; ಅಮೃತರಸವೋ ಎಂಬಂತಿದ್ದ ಆ ಮಧುರಜಲವನ್ನು ಪಾನಮಾಡಿ ತೃಪ್ತಿಗೊಂಡು ಮುಂದೆ ಹೊರಟರು. ನಿರಂತರ ಪ್ರಯಾಣ ದಿಂದ ಮಾರ್ಗಾಯಾಸವಾದರೂ ಲೆಕ್ಕಿಸದೆ ಮುಂದೆ ಮುಂದೆ ನಡೆಯುತ್ತಿರಲು, ಎದುರಿಗೆ, ತಾವು ಗಳಿಸಿದ್ದ ಪುಣ್ಯರಾಶಿಯೇ ಪರ್ವತರೂಪದಿಂದ ಕಂಡುಬರು ತ್ತಿರುವುದೋ ಎಂಬಂತಿದ್ದ ಮಹಾಬಲಾದ್ರಿಯು ದೃಷ್ಟಿಗೋಚರವಾಯಿತು.

ಸ್ವಪ್ನದಲ್ಲಿ ದೇವಿಯು ನುಡಿದ ಮಾತುಗಳನ್ನು ಸ್ಮರಿಸಿಕೊಂಡು, ಆ ಗಿರಿ ಶಿಖರದಲ್ಲಿ ನೆಲಸಿರುವ ಜಗಜ್ಜನನಿಯೇ ತಮ್ಮ ಮನೋಭೀಷ್ಟದಾಯಿಕೆ ಎಂಬ ನಂಬಿಕೆಯು ಮನಸ್ಸಿನಲ್ಲಿ ದೃಢವಾಗಿರಲು, ಆಕೆಯ ಸಾನ್ನಿಧ್ಯದಿಂದ ಪವಿತ್ರವೆನಿಸಿದ ಆ ಗಿರಿಯನ್ನು ಸಮೀಪಿಸಿದರು. ಆ ಗಿರಿಗೇ ಸಾಷ್ಟಾಂಗ ನಮಸ್ಕಾರಮಾಡಿ, ಅಂಜುತ್ತಂಜುತ್ತ ಪಾದಗಳನ್ನಿಟ್ಟು ಮೇಲಕ್ಕೆ ಹತ್ತ ತೊಡಗಿದರು. ಆ ಪವಿತ್ರಗಿರಿಯನ್ನು ಪಾದಗಳಿಂದ ಸೋಕುವ ತಮ್ಮ ಅಪಚಾರವನ್ನು ಮನ್ನಿಸೆಂದು ತಾಯಿ ಚಾಮುಂಡಾಂಬಿಕೆಯನ್ನು ಪ್ರಾರ್ಥಿಸಿ ಕೊಳ್ಳುತ್ತ ಬೆಟ್ಟವನ್ನು ಹತ್ತಿದರು.

ಬೆಟ್ಟವನ್ನು ಏರುತ್ತ ಏರುತ್ತ ಸುತ್ತಣ ಸಮತಳ ಪ್ರದೇಶವು ಕೆಳಕ್ಕೆ ಸರಿಯುತ್ತಿರುವಂತೆ ಕಂಡುಬರಲು, ರಾಜಪುತ್ರರು ಬಹುದೂರದ ವಿಸ್ತಾರ

ಪ್ರದೇಶವನ್ನು ಕಂಡು ಮನಸ್ಸಿನಲ್ಲಿ ಪರಮಾನಂದಗೊಂಡರು. ಬೆಟ್ಟದ ಬಗೆ ಬಗೆಯ ಬಣ್ಣದ ಶಿಲೆಗಳೂ ಅಲ್ಲಲ್ಲೇ ಕಂಡುಬಂದ ಗಿರಿಗುಹೆಗಳೂ ಕೋಡುಗಲ್ಲುಗಳೂ ಬಗೆಬಗೆಯ ಗಿಡಬಳ್ಳಿ ಜಾತಿಗಳೂ ಅವರ ಆನಂದವನ್ನೂ ಆಶ್ಚರ್ಯವನ್ನೂ ಹೆಚ್ಚಿಸಿದುವು.

ಗಿರಿಶಿಖರದಲ್ಲಿ ನೆಲಸಿರುವ ದೇವಿಯು ಭಕ್ತರಿಗೆ ವರಪ್ರದಾಯಿನಿ ಎಂದು ಹೇಳುವ ಮಾತು ಎಷ್ಟು ಅರ್ಥವತ್ತಾಗಿದೆ ಯೋಚಿಸಿರಿ. ಗಿರಿಯ ಬುಡದಿಂದ ಶ್ರದ್ಧಾವಂತರಾಗಿ ಹತ್ತಿ ಬರುವ ಸಾಧಕರ ಎದೆ, ನಡು, ತೊಡೆ, ಮೊಳಕಾಲು, ಪಾದ- ಇವುಗಳಿಗೆ ಅತಿ ಕಠಿನ ವ್ಯಾಯಾಮವನ್ನು ಕೊಟ್ಟು ದೇಹದಲ್ಲಿಯ ಸಕಲ ದೋಷಗಳನ್ನೂ ಬೆವರಿನ ರೂಪದಿಂದ ಪರಿಹರಿಸುವುದು ಆರೋಗ್ಯದೃಷ್ಟಿಯಿಂದ ಒಂದು ಮಹಾ ವರಪ್ರಸಾದವಲ್ಲವೇ! ಅಷ್ಟು ಮಾತ್ರವೇ ಅಲ್ಲ, ಬೆಟ್ಟದ ಮೇಲಿನ ನಿರ್ಮಲ ವಾಯುವಿನ ಉಚ್ಛ್ವಾಸದಿಂದ ಅವರ ಹೃದಯಗಳನ್ನೂ ಶುದ್ಧಿಗೊಳಿಸಿ, ದಿವ್ಯ ಆರೋಗ್ಯಭಾಗ್ಯವನ್ನು ಗಳಿಸಿಕೊಡುವ ದೇವಿಯು ಪ್ರತ್ಯಕ್ಷ ವರಪ್ರದಾಯಿನಿಯಲ್ಲವೆ! ತನ್ನ ಆರಾಧಕರಲ್ಲಿ ಯಾರಿಗಾದರೂ ಅಸ್ಥಿಗತವಾದ ದೋಷಗಳಿದ್ದು ಅವು ಅವರನ್ನು ವ್ಯಾಧಿರೂಪದಿಂದ ಪೀಡಿಸುತ್ತಿದ್ದರೆ, ತನ್ನ ಗಿರಿಯಲ್ಲಿ ಬೆಳೆವ ದಿವ್ಯಮೂಲಿಕೆಗಳಿಂದ ಅವುಗಳನ್ನು ನೀಗಿಸುವ ಅಭಯಹಸ್ತವೂ ಆ ಮಹಾಮಾತೆಗಿರುವುದು. ಬೆಟ್ಟದ ಎಲ್ಲಾ ಭಾಗವೂ ತೃಣಜಲಮಯವಾಗಿದೆ. ಎಲ್ಲೆಲ್ಲೂ ಸಂಪಗೆ, ಪಾದರಿ ಮುಂತಾದ ಪುಷ್ಪತರುಗಳಿವೆ. - ಮಾವು ಹಲಸು ಮುಂತಾದ ಫಲವೃಕ್ಷಗಳು ಶೋಭಿಸುತ್ತಿವೆ. ಇವುಗಳನ್ನು ಕಂಡ ಆ ನೃಪಕುಮಾರರ ಆನಂದವು ಗಳಿಗೆ ಗಳಿಗೆಗೂ ಉಕ್ಕುತ್ತಿದೆ. ಹೀಗೆ ಅವರು ಬಹು ಸಂತೋಷಭರಿತರಾಗಿ ಬೆಟ್ಟವನ್ನು ಹತ್ತಿದರು. ಅಲ್ಲೊಂದು ಸಂಪಿಗೆಯ ಮರದ ಬಳಿ ಇದ್ದ ದೇವಾಲಯವನ್ನು ಕಂಡು, ಅದೇ ಸರ್ವಮಂಗಳೆಯು ನೆಲಸಿರುವ ಎಡೆ ಎಂದುಕೊಂಡು ಭಕ್ತಿಯಿಂದ ಕೈಮುಗಿದು ನಮಸ್ಕರಿಸಿದರು.

ತರುವಾಯ, ಬಳಿಯಲ್ಲೇ ಇದ್ದ ಕೆರೆಯಲ್ಲಿಳಿದು ಸ್ನಾನಮಾಡಿ ಸಂಧ್ಯಾದಿಗಳನ್ನು ತೀರಿಸಿಕೊಂಡರು. ಸಕಲ ಪೂಜಾಸಾಮಗ್ರಿಗಳನ್ನೂ ತೆಗೆದುಕೊಂಡು ದೇವಾಲಯವನ್ನು ಪ್ರವೇಶಿಸಿ, ಅಲ್ಲಿ ಶಂಕರನ ಅರ್ಧಾಂಗಿಯಾದ ಮಹಾಮಾತೆಯ ಭವ್ಯಮೂರ್ತಿಯನ್ನು ಕಂಡು ದೀರ್ಘದಂಡ ನಮಸ್ಕಾರಮಾಡಿದರು.

ಅವರ ಕಣ್ಣುಗಳಿಂದ ಧಾರೆಧಾರೆಯಾಗಿ ಆನಂದ ಬಾಷ್ಪಗಳು ಸುರಿದುವು. ಭಕ್ತಿಯ ಆವೇಶದಿಂದ ಮೈಯಲ್ಲಿ ಪುಳಕವುಂಟಾಯಿತು. ದೇವಿಗೆ ಪೂಜೆಯನ್ನು ಸಲ್ಲಿಸಿದನಂತರ ಮೌನವಾಗಿ ಕೆಲಹೊತ್ತು ಧ್ಯಾನಿಸಿ, ಬಳಿಕ ಅಂಜಲಿಬದ್ಧರಾಗಿ, "ತಾಯೀ! ವಿಂಧ್ಯಗಿರಿಯಲ್ಲಿ ನೀನು ಅಪ್ಪಣೆಮಾಡಿದಂತೆ ಇಲ್ಲಿಗೆ ಬಂದಿದೇವೆ; ಮುಂದೆ ಏನು ಮಾಡಬೇಕೆಂಬುದನ್ನೂ ನೀನೇ ಅಪ್ಪಣೆಕೊಡಿಸಬೇಕು. ನಮ್ಮ ಸಕಲ ಶ್ರೇಯೋಭಿವೃದ್ಧಿಯೂ ಭಯನಿವಾರಣೆಯಾದ ನಿನ್ನನ್ನೇ ಸೇರಿವೆ. ನಿನ್ನ ಆಶ್ರಿತರು ನಾವು; ನಿನ್ನ ಪಾದಗಳಿಗೆ ಶರಣು ಬಂದಿದ್ದೇವೆ; ನಮ್ಮ ಕೀಳುಮೇಲುಗಳೆಲ್ಲವೂ ನಿನ್ನ ಪಾದಕ್ಕೇ ಸೇರಿವೆ; ತಾಯೀ! ಅನುಗ್ರಹಿಸು" ಎಂದು ಪ್ರಾರ್ಥಿಸಿಕೊಂಡರು. ನಮಸ್ಕಾರ ಮಾಡಿ ಮಂಗಳಾರತಿಯನ್ನು ಸ್ವೀಕರಿಸಿ ಹೊರ ಹೊರಟರು. ಸಮೀಪದ ದೇವಾಲಯಗಳಲ್ಲಿಯ ಮಹಾಬಲೇಶ್ವರನನ್ನೂ ನಾರಾಯಣ ಸ್ವಾಮಿಯನ್ನೂ ದರ್ಶನ ಮಾಡಿದರು. ಆ ದಿನ ನಿರಶನ ವ್ರತದಿಂದಲೇ ಕ್ಷೇತ್ರವಾಸ ಮಾಡಲು ನಿಶ್ಚಯಿಸಿ, ಅಂಬಿಕೆಯನ್ನು ಮನಸ್ಸಿನಲ್ಲಿ ಸ್ಮರಿಸುತ್ತ ಮಲಗಿದರು.

ಅತಿಶಯ ಶ್ರದ್ಧಾಭಕ್ತಿಗಳಿಂದ ತನ್ನ ಪಾದಗಳಲ್ಲೇ ಚಿತ್ತವಿಟ್ಟು ಮಲಗಿದ್ದ ಆ ರಾಜಪುತ್ರರನ್ನು ಶಾಂಭವಿಯು ಒಮ್ಮೆ ಕರುಣಾಪಾಂಗದಿಂದ ನೋಡಿದಳು. ಹಿರಿಯನಾದ ರಾಜಪುತ್ರ ಯದುರಾಯನಿಗೆ ಹಿಂದಿನಂತೆಯೇ ಪುನಃ ಮತ್ತೊಂದು ಕನಸಾಯಿತು. ಅದರಲ್ಲಿ ಚತುರ್ಭುಜೇಶ್ವರೀ ಗೌರೀದೇವಿಯು ಪ್ರತ್ಯಕ್ಷಳಾಗಿ, "ರಾಜಪುತ್ರಾ! ನೀವಿಲ್ಲಿಗೆ ಬಂದುದು ಉತ್ತಮವಾಯಿತು. ಈ ಗಿರಿಗೆ ಆಗ್ನೇಯ ಭಾಗದಲ್ಲಿ ರಕ್ತಬೀಜಾಸುರನನ್ನು ನಿರ್ಮೂಲ ಮಾಡಿದ ಜ್ವಾಲಾರಸನೆ ಎಂಬ ದೇವಿಯು ನೆಲಸಿರುವಳು. ನೀವು ಅಲ್ಲಿಗೆ ಹೋಗಿ ಆ ದೇವಿಯ ದರ್ಶನಮಾಡಿಕೊಂಡು, ತರುವಾಯ ಮೈಸೂರು ದೊಡ್ಡಕೆರೆಯ ಬಳಿ ಇರುವ ಕೋಡೀ ಭೈರವಾಲಯದಲ್ಲಿ ತಂಗಿರಿ. ಅಲ್ಲಿಗೆ ಒಬ್ಬ ಜಂಗಮನು ಬಂದು ಮುಂದೆ ಮಾಡಬೇಕಾದ ಕೆಲಸವೇನೆಂದು ನಿಮಗೆ ಸೂಚಿಸುವನು. ನೀವು ಸಂದೇಹಗೊಳ್ಳದೆ ಕಾಲೋಚಿತವಾಗಿ ಯೋಚಿಸಿ ಧೈರ್ಯ ಸಾಹಸ ಸಂಪನ್ನರಾಗಿ ನಡೆಯಿರಿ. ಮುಂದೆ ಸಕಲ ಶುಭ ಫಲಗಳೂ ಕೈಸೇರುವುವು" ಎಂದು ನುಡಿದು ಕಣ್ಮರೆಯಾದಳು.

ದೇವಿಯ ಉತ್ತೇಜಕ ನುಡಿಗಳು ಯದುರಾಯನ ಮನಸ್ಸನ್ನು ಸಂತೋಷ ಗೊಳಿಸಿದುವು. ಆತನು ಒಡನೆಯೇ ಎಚ್ಚತ್ತು, ತಮ್ಮನನ್ನೂ ಎಬ್ಬಿಸಿ, ತನ್ನ ಕನಸಿನ ಅನುಭವವನ್ನು ತಿಳಿಸಿದನು. ವಿಂಧ್ಯಗಿರಿಯ ಮತ್ತು ಮಹಾ ಬಲಾದ್ರಿಯ ಅಮ್ಮನವರಿಬ್ಬರೂ ತಮ್ಮಲ್ಲಿ ಪರಮಾನುಗ್ರಹ ಮಾಡಿದರೆಂದು ಬಗೆ ಬಗೆಯಿಂದ ಸ್ತುತಿಸಿದರು.

---

## ೩ ಭೈರವಾಲಯದಲ್ಲಿ

ಮೈಸೂರು ದೊಡ್ಡಕೆರೆಯ ಕಟ್ಟೆಯ ಮೇಲೆ ಸೀರಿಗಾಗಿ ಬಂದ ನಾಲ್ಕು ಮಂದಿ ಹೆಂಗಸರು ತಮ್ಮ ಗಡಿಗೆಗಳನ್ನು ತೊಳೆಯುತ್ತ ಕುಳಿತಿದ್ದಾರೆ. ಅವರು ಆಗಾಗ ಅಲ್ಲೇ ಎದುರಿಗಿದ್ದ ದೇವಸ್ಥಾನದ ಕಡೆ ನೋಡುತ್ತಿದ್ದಾರೆ. ಕೈ ಬೆರಳಿ ನಿಂದ ತೋರಿಸುತ್ತ, ಏನೋ ಗುಸು ಗುಸು ಮಾತನಾಡಿಕೊಳ್ಳುತ್ತಿದ್ದಾರೆ. ಸ್ವಲ್ಪಹೊತ್ತು ಹೀಗಾದಮೇಲೆ ಅವರು ಸ್ವಲ್ಪ ಗಟ್ಟಿಯಾಗಿಯೇ ಒಬ್ಬರೊಂದಿ ಗೊಬ್ಬರು ಮಾತನಾಡಿಕೊಳ್ಳದಿರಲು ಸಾಧ್ಯವಾಗಲಿಲ್ಲ. ಆದರೂ ತಕ್ಕಷ್ಟು ಮೆಲ್ಲಗೆಯೇ—

—"ನಿಂಗೀ, ಏ! ನಿಂಗೀ, ಅಲ್ನೋಡೆ ಅಲ್ಲಿ, ಅವರ್ಯಾರು ಕಾಣಿಸ್ತೈತಾ?"

ನಿಂಗಿ:—ಎಲ್ಲೇ? ಯಾರನ್ನ ನೋಡ್ತಿದ್ದೀಯೆ ಚೆನ್ನೀ! ಇಲ್ಯಾರು ಬಂದಾರೆ ಇಷ್ಟೊಟ್ಟತ್ನಾಗ?

ಚೆನ್ನಿ:—ಏ, ಭೈರಪ್ಪನ ಗುಡಿಯಾಗಾ!

ನಿಂಗಿ:—ಭೈರಪ್ಪನ ಗುಡಿಯಾಗೆ ಮತ್ಯಾರಿರ್ತಾರೇ? ಪೂಜಾರಪ್ಪ ಇರಬೌದು!

ಚೆನ್ನಿ:—ಪೂಜಾರಪ್ಪ ಅಲ್ಲಾಕಣೇ! ಅಲ್ನೋಡೆ. ಅವರನ್ನ ನೋಡಿದ್ರೆ ನಮ್ಮೂರೋರಂಗೆ ಕಾಣ್ಸಾಕಿಲ್ಲ, ಅಲ್ವೇನೇ ತಿಮ್ಮಿ?

ತಿಮ್ಮಿ:—ಹೌದು ಕಣೇ! ಅವರು ಯಾರೋ ಅವ್ವ!

ನಿಂಗಿ:—ಯಾರೋ ಅಮ್ಮ! ಯಾರೋ ಹೊಸಬರ್ಹಂಗೌರೆ.

ತಿಮ್ಮಿ:—ಅಲ್ಕಣೇ ನಿಂಗಿ; ಅವರ್ಯಾರೋ ರಾಜರೋ ಗೀಜರೋ ಇರೋ ಹಂಗೈತೆ, ಅಲ್ವೇನೆ?

ಚಿನ್ನಿ:—ಲೇ ತಿಮ್ಮಿ, ಮೆಲ್ಲಗೆ ಮಾತಾಡ್ಲೆ; ನಿನ್ಮನೆ................ ಆವರೆಗೂ ಅವರಾಡುತ್ತಿದ್ದ ಮಾತುಗಳನ್ನು ಸುಮ್ಮನೆ ಕೇಳುತ್ತಿದ್ದ ಗೌರಮ್ಮನು ಸ್ವಲ್ಪ ಗಟ್ಟಿಯಾಗಿಯೇ—"ಅವರ್‍ಯಾರು ಗೊತ್ತಿಲ್ವೇನ್ರಿ? ನಾನು ಹೇಳ್ತೀನಿ ಕೇಳ್ರಿ. ಮನ್ನೆ ಐನೋರು ರಾಮಾಯಣದ ಕಥೆ ಹೇಳ್ದಾಗ ಕೇಳ್ಲಿಲ್ವೇನ್ರಿ ನೀವು? ವಾಲಿ ಅಂಬೋ ಕಪೀನ ಕೊಲ್ಲೋಕೆ ರಾಮಾಲಕ್ಷ್ಮಣ ಅಂತ ಇಬ್ಬರು ರಾಜಪುತ್ರರು ಬಂದಿದ್ರುಂತಲ್ಲೇ ಕಿಷ್ಕಿಂದ ಪಟ್ಟಣದ ಹತ್ರಕ್ಕೆ! ಹಂಗೇನೇ ಈಗ ನಮ್ಮ ರಾಜಪುತ್ರೀನ ಅಪಹರಿಸೋಕೆ ಹೊಚ್ಕೊಂಡಿರೋ ಮಾರನಾಯಕನ್ನ ಕೊಲ್ಲೋಕೆ ಇಬ್ಬರು ದೇವತೆಗಳ್ನ ಶಿವ ಕಳ್ಸವ್ನಂತೆ ಕಣೆ! ಅವರೇ ಇವ್ರು; ತಿಳೀತಾ?

ತಿಮ್ಮಕ್ಕ:—ಲೇ ಗೌರಿ! ಎಲ್ಲಿ ಕಲ್ತೇ ಈ ಪುರಾಣಾನ! ಅಬ್ಬಬ್ಬಬ್ಬ! ನಿಮ್ಮತ್ತೆ ಹೇಳ್ತಿದ್ಲು - ನಿನ್ನ ಬಾಯಿಗೆ ಬೀಳ್ದಿರೋ ಸಮಾಚಾರಾನೇ ಇಲ್ಲಾ ಅಂತ. ಅದು ಸುಳ್ಳಲ್ಲ ನೋಡು! ಅಲ್ಲಾ ಕಣೇ, ಅವರು ಯಾರೋ ಏನೋ? ಎಲ್ಲಿಯೋರೋ, ಯಾಕೆ ಬಂದೌರೋ? ಯಾರ್‌ಗೂ ಗೊತ್ತಿಲ್ಲ. ನಮ್ಮೂರಾಗೇ ಇನ್ನೂ ಯಾರೂ ಅವರನ್ನ ನೋಡಿಲ್ಲ. ಇವಳಿಗಾಗ್ಲೆ ಗೊತ್ತಾಗೈತೆ. 'ಅವರು ದೇವತೆಗಳು; ಮಾರನಾಯಕನ್ನ ಕೊಲ್ಲೋಕೆ ಶಿವ ಕಳ್ಸವ್ನೆ' ಅಂತ! ಅಬ್ಬಬ್ಬಾ! ಏನು ಬಾಯಾಳಿ ಹೆಣ್ಣೇ ನೀನು?"

ಚಿನ್ನಿ:—ತಿಮ್ಮಕ್ಕಾ! ಅಂಗನ್‌ಬ್ಯಾಡ. ಒಂದ್ಸಮಯ ಇದ್ರೂ ಇರಬೌದು. ಶಿವ ಅವಳ ಬಾಯಾಗೆ ಯಾಕೆ ಅಂಗೆ ನುಡ್ಸವ್ನೋ, ಯಾರು ಬಲ್ರು?—

ಹೀಗೆ ಮಾತನಾಡಿಕೊಳ್ಳುತ್ತ, ನೀರಿನ ಗಡಿಗೆಗಳನ್ನು ತಲೆಯ ಮೇಲೆ ಹೊತ್ತುಕೊಂಡು, ಆ ಹೆಂಗಸರು ಹೊತ್ತು ಹುಟ್ಟುವುದರೊಳಗಾಗಿ ತಮ್ಮ ತಮ್ಮ ಮನೆಗಳನ್ನು ಸೇರಿದರು.

'ಕೋಡೀ ಭೈರವಸ್ವಾಮಿಯ ದೇವಸ್ಥಾನದಲ್ಲಿ ಯಾರೋ ಹೊಸಬರು-ಘನವಂತರು ಬಂದು ಇಳಿದಿದ್ದಾರೆ', ಎಂಬ ಸಂಗತಿಯು ಆ ನಾಲ್ವರು ಹೆಂಗಸರ ಬಾಯಿಂದ ಸ್ವಲ್ಪ ಹೊತ್ತಿನೊಳಗಾಗಿ ಒಬ್ಬರಿಂದ ಒಬ್ಬರಿಗೆ ತಿಳಿದು, ಆ ಬೀದಿಯೆಲ್ಲಾ ಹಬ್ಬಿತು. ಅರಮನೆಯ ಕೆಲಸಕ್ಕೆ ಹೊರಡುತ್ತಿದ್ದ ಅವ್ವೆಯೊಬ್ಬಳು ಆ ಸಂಗತಿಯನ್ನು ಕೇಳಿ ಒಡನೆಯೇ ದೇವಾಜಮ್ಮಣ್ಣಿಯ ಬಳಿಗೆ ಓಡಿಹೋಗಿ, "ಅಮ್ಮಣ್ಣಿಯವರೇ! ನಮ್ಮೂರಿನ ದೊಡ್ಡಕೆರೆ ಕೋಡೀ ಭೈರವದೇವರ

ಗುಡಿಯೊಳಗೆ ಯಾರೋ ಇಬ್ಬರು ಹೊರ ಊರಿನವರು ಬಂದು ಇಳಿದಿದ್ದಾರಂತೆ! ಅವರನ್ನು ನೋಡಿದರೆ ಎತ್ತರವಾಗಿ ಲಕ್ಷಣವಾಗಿ ರಾಜರ ಹಾಗೇ ಇದ್ದಾರಂತೆ! ನಮ್ಮ ಬೀದಿಯ ಹೆಂಗಸರು ನೀರಿಗೆ ಹೋಗಿದ್ದಾಗ, ಈಗಲೇ ನೋಡಿಕೊಂಡು ಬಂದಿದ್ದಾರೆ. ಈ ದಿನ ಇದೊಂದು ಹೊಸ ಸುದ್ದಿ" ಎಂದು ಹೇಳಿದಳು.

ಅವಳೇನೋ ಅದೊಂದು ಹೊಸ ಸುದ್ದಿ ಎಂದು ಹೇಳಿದಳಾದರೂ ಮಹಾರಾಣಿಗೆ ಅದು ಪರಮಾಶ್ಚರ್ಯದ ಸುದ್ದಿಯಾಯಿತು. ಅದೇ ಬೆಳಗಿನ ಜಾವ ತನಗೆ ಬಿದ್ದ ಕನಸಿನಲ್ಲಿ ರಾಜಪುತ್ರರಿಬ್ಬರು ದ್ವಾರಕಾಪುರದ ಕಡೆಯಿಂದ ಬಂದು ಆ ಊರಲ್ಲಿ ತಂಗಿದ್ದಾರೆ ಎಂದು ಸಾಧುಪುರುಷನು ಹೇಳಿದ್ದುದಕ್ಕೂ ಅವರು ಎಲ್ಲಿದ್ದಾರೋ ಎಂದು ತಾನು ಯೋಚಿಸುತ್ತಿದ್ದ ಹೊತ್ತಿಗೆ ಸರಿಯಾಗಿ ಅವರು ಬಂದಿಳಿದಿದ್ದ ಗೊತ್ತಾದ ಸ್ಥಳ ತಿಳಿದುದಕ್ಕೂ, ಆಕೆಗೆ ಹೇಳಲಾಗದಷ್ಟು ಸಂತೋಷವಾಯಿತು. ಅನುಕೂಲವಾಗುವ ಕಾಲಕ್ಕೆ ದೇವರು ಹೀಗೆಯೇ ಒದಗಿಸಿಕೊಡುತ್ತಾನೆಂದು ಆಕೆಯು ಬಹು ಸಮಾಧಾನಗೊಂಡಳು. ಆದರೂ ಆ ಸಂಗತಿಯೇನೋ? ಅವರು ಯಾರೋ? ಯಾವ ದೇಶದವರೋ? ನಿಶ್ಚಯವಾಗಿ ತಿಳಿಯಬೇಕೆಂದು, ಕೂಡಲೇ ತಮ್ಮ ಅರಮನೆಯ ಆಶ್ರಿತನಾದ ಒಬ್ಬ ಜಂಗಮಾರ್ಯನನ್ನು ಕರೆಯಿಸಿ, "ಅಯ್ಯಾ! ನೀವು ಈಗಲೇ ಹೊರಟು ದೊಡ್ಡ ಕೆರೆಯ ಬಳಿಯಿರುವ ಕೋಡೀ ಭೈರವೇಶ್ವರನ ದೇವಸ್ಥಾನಕ್ಕೆ ಹೋಗಿ, ಅಲ್ಲಿಗೆ ಹೊಸಬರು ಯಾರಾದರೂ ಬಂದಿದ್ದಾರೆಯೇ ತಿಳಿದು ಬನ್ನಿರಿ. ಹಾಗೆ ಬಂದಿದ್ದರೆ, ಅವರು ಯಾರು? ಎಲ್ಲಿಯವರು? ಇಲ್ಲಿಗೆ ಯಾವ ಕೆಲಸಕ್ಕಾಗಿ ಬಂದಿದ್ದಾರೆ? ಎಂಬುದನ್ನೂ ತಿಳಿದು ಬನ್ನಿರಿ, ಸಾವಕಾಶಮಾಡದೆ ಈಗಲೇ ಬರಬೇಕು" ಎಂದು ಹೇಳಿ ಕಳುಹಿಸಿದಳು.

ಜಂಗಮಾರ್ಯನು ಮಹಾರಾಣಿಯ ಅಪ್ಪಣೆಯನ್ನು ಪಡೆದು ಸ್ವಲ್ಪವೂ ಸಾವಕಾಶಮಾಡದೆ ದೊಡ್ಡಕೆರೆಯ ಕಡೆ ನಡೆದನು. ದೇವಸ್ಥಾನದ ಬಾಗಿಲು ತೆರೆದಿತ್ತು. ಹೊರಗಿನಿಂದಲೇ, "ಶಂಭೋ ಶಂಕರ! ಜೈ ಪರಮೇಶ್ವರ" ಎಂದು ಗಟ್ಟಿಯಾಗಿ ಹೇಳಿಕೊಂಡು ಆತನು ಭೈರವೇಶ್ವರನಿಗೆ ನಮಸ್ಕಾರಮಾಡಿದನು. ಒಳಗಿದ್ದವರಿಬ್ಬರೂ ಆ ಶಬ್ದವನ್ನು ಕೇಳಿ, ಒಮ್ಮೆಗೇ ತಿರುಗಿ ನೋಡಿದರು ;— ಜಂಗಮ! ಆತನನ್ನು ಕಂಡು ಅವರಿಗೆ ಪರಮಾಶ್ಚರ್ಯವಾಯಿತು.

ತಮಗೆ ದೇವತೆಯು ಸ್ವಪ್ನದಲ್ಲಿ ಹೇಳಿದ ಮಾತಿನ ಫಲವು, ಅಷ್ಟು ಶೀಘ್ರವಾಗಿ ಪ್ರತ್ಯಕ್ಷವಾದುದನ್ನು ಕಂಡು ಅವರು ದೇವರ ದಯವು ತಮ್ಮ ಮೇಲೆ ಸಂಪೂರ್ಣವಾಗಿದೆ ಎಂದುಕೊಂಡರು. ಜಂಗಮಾರ್ಯನು ದೇವಾಲಯದೊಳಹೊಕ್ಕನು. ಅಣ್ಣ ತಮ್ಮಂದಿರಿಬ್ಬರೂ ಒಡನೆಯೇ ಎದ್ದು ಕೈಮುಗಿದು ಉಪಚರಿಸಿ ಆತನನ್ನು ಕುಳ್ಳಿರಿಸಿದರು. ಉಭಯರಿಗೂ ಕುಶಲ ಪ್ರಶ್ನೆಗಳಾದುವು. ಜಂಗಮಾರ್ಯನು "ಪ್ರಭುಗಳೇ! ತಮ್ಮ ಪರಿಚಯವು ನನಗಿಲ್ಲ. ತಾವು ಈ ಪ್ರಾಂತ್ಯಕ್ಕೆ ದಯಮಾಡಿಸಿದ್ದು ಇದೇ ಮೊದಲೆಂದು ತೋರುತ್ತದೆ. ತಾವು ನಮ್ಮ ರಾಜಧಾನಿಗೆ ದಯಮಾಡಿಸಿರುವ ವರ್ತಮಾನವು ಅರಮನೆಗೆ ತಿಳಿದೊಡನೆಯೇ, ನಮ್ಮ ಮಹಾರಾಣಿಯವರು ತಮ್ಮ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬರಲು ನನ್ನನ್ನು ತಮ್ಮ ಬಳಿಗೆ ಕಳುಹಿಸಿದರು. ತಮ್ಮ ಜನ್ಮದಿಂದ ಯಾವ ವಂಶವು ಪಾವನವೆನ್ನಿಸಿತೋ, ತಮ್ಮ ವಾಸದಿಂದ ಯಾವ ದೇಶವು ಯಶಸ್ಸಂಪನ್ನವಾಯಿತೋ, ಯಾವ ಮಹಾ ಕಾರ್ಯಸಾಧನೆಗಾಗಿ ತಾವು ಈ ರಾಜಧಾನಿಗೆ ದಯಮಾಡಿಸಿದ್ದೀರೋ, ತಿಳಿಯಲು ನಮ್ಮ ಮಹಾರಾಣಿಯವರು ಕುತೂಹಲಪಡುತ್ತಿದ್ದಾರೆ" ಎಂದು ಬಿನ್ನವಿಸಿದನು.

ಜಂಗಮಾರ್ಯನ ಆ ಮಾತುಗಳನ್ನು ಕೇಳಿ ಯದುರಾಯರು ಹಸನ್ಮುಖದಿಂದ "ಅಯ್ಯಾ! ಬಾಂಧವರೇ! ನಾವು ದ್ವಾರಕಾನಗರಿಯಲ್ಲಿ ಸುಪ್ರಸಿದ್ಧವೆನ್ನಿಸಿದ ಯದುವಂಶದ ಅರಸುಮನೆತನದಲ್ಲಿ ಜನಿಸಿದವರು. ನನ್ನ ಹೆಸರು ಯದುರಾಯ; ಈತನು ನನ್ನ ತಮ್ಮ; ಈತನಿಗೆ ಕೃಷ್ಣರಾಯನೆಂದು ಹೆಸರು. ವಿಂಧ್ಯವಾಸಿನೀ ಮಹಾದೇವಿಯನ್ನು ನಾವು ಆರಾಧಿಸಿ ಪ್ರಾರ್ಥಿಸಲಾಗಿ ಆ ದೇವಿಯು ಈ ಮಹಾಬಲಾದ್ರಿಯಲ್ಲಿ ನೆಲಸಿರುವ ಚಾಮುಂಡಾಂಬಿಕೆಯನ್ನು ದರ್ಶನಮಾಡಬೇಕೆಂದು ಆಜ್ಞಾಪಿಸಿದಳು. ಆ ದೇವಿಯ ಆಜ್ಞಾನುಸಾರ ಇಲ್ಲಿಗೆ ಬಂದೆವು. ಅಮ್ಮನವರ ದರ್ಶನವಾಯಿತು. ಮುಂದೆ ದೇವಿಯ ಆಜ್ಞೆ ಹೇಗಾಗುವುದೋ ಹಾಗೆ ನಡೆಯಲುಳ್ಳವರು. ನೀವು ಯಾರು? ಈ ರಾಜ್ಯವು ಯಾವುದು? ಯಾವ ರಾಜೋತ್ತಮರ ಆಳ್ವಿಕೆಗೆ ಒಳಪಟ್ಟಿದೆ? ಇಲ್ಲಿಯ ಹೆಚ್ಚು ಸಮಾಚಾರವೇನು? ಕೃಪೆಯಿಟ್ಟು ತಿಳಿಸಬೇಕೆಂದು ಕೋರುವೆವು" ಎಂದು ನುಡಿದರು.

ಆಗ ಜಂಗಮಾರ್ಯನು "ಪ್ರಭುಗಳೇ! ಈ ರಾಷ್ಟ್ರವನ್ನು ಮೈಸೂರು ದೇಶವೆನ್ನುವರು. ಈ ಪಟ್ಟಣವೇ ಅದರ ರಾಜಧಾನಿ. ಭೋಜವಂಶಕ್ಕೆ ಸೇರಿದ ಚಾಮರಾಜರೆಂಬ ಪ್ರಭುಗಳು ಇದನ್ನು ಧರ್ಮದಿಂದ ಪಾಲಿಸುತ್ತಿದ್ದು ಈಗ್ಗೆ ಸ್ವಲ್ಪದಿನಗಳ ಕೆಳಗೆ ಕಾಲಾಧೀನರಾದರು. ಅವರಿಗೆ ಗಂಡು ಸಂತತಿ ಯಿಲ್ಲವಾದ್ದರಿಂದ ಮಹಾರಾಣಿಯವರೇ ಈಗ ರಾಜ್ಯಭಾರ ಮಾಡುತ್ತಿದ್ದಾರೆ. ಅವರಿಗೆ ಈಗ ಒಂದು ಅಗಾಧ ಕಷ್ಟವು ಪ್ರಾಪ್ತವಾಗಿದೆ. ಮಹಾರಾಜರ ಕಾಲ ದಲ್ಲಿ ಸೈನ್ಯಾಧಿಪತಿಯಾಗಿದ್ದ ಮಾರನಾಯಕನೆಂಬುವನು ಸೇನೆಯನ್ನು ತನ್ನ ಪಕ್ಷವಾಗಿ ಮಾಡಿಕೊಂಡು ಬಹು ಪ್ರಬಲಿಸಿ ರಾಜ್ಯವನ್ನೇ ಅಪಹರಿಸಬೇಕೆಂದು ಹವಣಿಸಿದ್ದಾನೆ. ಅಷ್ಟೇ ಅಲ್ಲ; ಆ ದುರುಳನು ಮಹಾರಾಣಿಯ ಒಬ್ಬಳೇ ಮಗಳಾದ ರಾಜಪುತ್ರಿಯನ್ನೂ ಅಪಹರಿಸಬೇಕೆಂದು ದುರಾಲೋಚನೆ ಮಾಡಿ ದ್ದಾನೆ. ಈ ಸಂಗತಿಯನ್ನು ತಿಳಿದು ಮಹಾರಾಣಿಯವರು ಬಹು ಚಿಂತಾಕ್ರಾಂತ ರಾಗಿದ್ದಾರೆ" ಎಂದು ಪ್ರತ್ಯುತ್ತರವಿತ್ತನು.

ಆ ಸಂಗತಿಯನ್ನು ಕೇಳಿ ಯದುರಾಯರು ಬಹು ಪರಿತಾಪಪಟ್ಟು, "ಇದು ಬಹು ಶೋಚನೀಯವಾದ ವರ್ತಮಾನ. ಅಂತಃಪುರವನ್ನು ಬಿಟ್ಟು ಹೊರಕ್ಕೆ ಬರಲು ಸಾಧ್ಯವಿಲ್ಲದ ಮಹಾರಾಣಿಯವರ ಆಳ್ವಿಕೆಯಲ್ಲಿ ಪುಂಡರು ಪ್ರಬಲಿಸುವುದು ಸ್ವಾಭಾವಿಕ. ಭಗವತೀ ಚಾಮುಂಡಾಂಬಿಕೆಯು ಈ ಆಪ ತ್ತನ್ನು ಹೇಗೆ ನಿವಾರಿಸುತ್ತಾಳೋ ನೋಡಬೇಕು" ಎಂದು ನಿಟ್ಟುಸಿರುಬಿಟ್ಟರು.

"ತಾವು ಹೇಳಿದಂತೆಯೇ ಮಹಾರಾಣಿಯವರೇನೋ ಅಮ್ಮನವರ ಮೇಲೆಯೇ ಸಮಸ್ತ ಭಾರವನ್ನೂ ಹಾಕಿದ್ದಾರೆ. ಮುಂದೆ ಹೇಗಾಗುವುದೋ ನೋಡಬೇಕು" ಎಂದು ನುಡಿದು, ಆತನು ಅವರ ಅಪ್ಪಣೆಯನ್ನು ಪಡೆದು ಹೊರಟು ಅರಮನೆಯನ್ನು ಸೇರಿದನು.

ಮಹಾರಾಣಿಯೂ ರಾಜಪುತ್ರಿಯೂ ಜಂಗಮನನ್ನು ಕಳುಹಿಸಿದಾಗಿ ನಿಂದ ಆತನು ಬರುವವರೆಗೂ ಒಂದೊಂದು ಗಳಿಗೆಯನ್ನೂ ಒಂದೊಂದು ಯುಗದಂತೆ ಕಳೆದರು. ಕನಸಿನಲ್ಲಿ ತಾವು ಕೇಳಿದ ಸಂಗತಿಯು ನಿಜವಾದುದೊ ಅಥವಾ ಕೇವಲ ಮನಸ್ಸಿನ ಭ್ರಾಂತಿಯೋ! ಕನಸಿನಲ್ಲಿ ಕಂಡ ಸಂಗತಿಗಳೆಲ್ಲ ನಿಜವಾಗುವಂತಿದ್ದರೆ ಕನಸಿನ ಗಂಟಿನಿಂದಲೂ ಮನುಷ್ಯನು ಭಾಗ್ಯವಂತ ನಾಗಬಹುದಷ್ಟೆ! ಅಯ್ಯೋ, ದುರ್ದೈವಿಗಳಾದ ನಮ್ಮ ಹಣೆಯಲ್ಲಿ ಇನ್ನೂ

ಎಂತೆಂತಹ ಕಷ್ಟಗಳನ್ನು ಅನುಭವಿಸಬೇಕೆಂದು ವಿಧಿ ಬರೆದಿದ್ದಾನೋ ಯಾರು ಬಲ್ಲರು?'' ಎಂದು ಹಲುಬುತ್ತ,-ಅಥವಾ ಯಾರು ಬಲ್ಲರು? ನಮ್ಮ ದುರದೃಷ್ಟ ಕಾಲ ಮುಗಿದು ಒಳ್ಳೆಯ ಕಾಲ ಒದಗಿದೆಯೋ ಏನೊ!'' ಎಂದುಕೊಳ್ಳುತ್ತಿದ್ದಾಗಲೇ, "ಜಯ ಪರಮೇಶ್ವರ" ಎಂದು ಕೂಗಿದ ಒಂದು ಶಬ್ದವು ಕಿವಿಗೆ ಬಿದ್ದಿತು.

ತಮ್ಮ ಅರಮನೆಯ ಜಂಗಮಾರ್ಯ ಶಿವಣ್ಣನ ಧ್ವನಿ! ಆತನ ಮುಖಭಾವವೂ ಜಯಶಬ್ದಪೂರ್ವಕವಾಗಿ ಒಳಹೊಕ್ಕ ಆತನ ಚರ್ಯೆಯೂ ಆತನು ಹೋಗಿದ್ದ ಕಾರ್ಯವು ಸುಮುಖವಾಗಿರಬಹುದೆಂದು ಮಹಾರಾಣಿಗೆ ಸೂಚಿಸಿದುವು. ಬಂದೊಡನೆಯೇ ಆತನು "ತಾಯಿ! ಇನ್ನು ನಿಮ್ಮ ಚಿಂತೆಯನ್ನು ಬಿಡಿರಿ; ನಿಮಗೆ ಕನಸಿನಲ್ಲಿ ಕಾಣಿಸಿಕೊಂಡವನು ಸಾಮಾನ್ಯ ಮನುಷ್ಯನಲ್ಲ; ಸಾಕ್ಷಾತ್ ಪರಶಿವನೇ ಇರಬೇಕು. ನಿಮ್ಮ ಕಷ್ಟಗಳೆಲ್ಲ ಇಂದಿಗೆ ತೀರಿದುವೆಂದು ತಿಳಿಯಿರಿ ನಾನು ಆ ರಾಜಪುತ್ರರನ್ನು ನೋಡಿ ಬಂದೆನು. ಅವರು ದ್ವಾರಕಾ ನಗರಿಯಲ್ಲಿ ಯದುವೀರರ ವಂಶದಲ್ಲಿ ಹುಟ್ಟಿದವರಂತೆ; ಮಹಾ ತೇಜಸ್ವಿಗಳಾಗಿದ್ದಾರೆ; ಮಹಾ ಶೂರರೆಂದೂ ತೋರುತ್ತದೆ; ನಮ್ಮ ರಾಜವಂಶದೊಂದಿಗೆ ಬಂಧುತ್ವನಡೆಯಿಸಲು ಯೋಗ್ಯರೆಂಬ ವಿಷಯದಲ್ಲಿ ಸಂದೇಹವಿಲ್ಲ. ಅಪ್ಪಣೆಯಾದರೆ ಅವರನ್ನು ಅರಮನೆಗೆ ಕರೆದುತರುತ್ತೇನೆ" ಎಂದು ಉತ್ಸಾಹದಿಂದ ನುಡಿದನು.

ಜಂಗಮಾರ್ಯನ ಮಾತುಗಳನ್ನು ಕೇಳಿದಂತೆಲ್ಲ ದೇವಾಜಮ್ಮಣ್ಣಿಯ ಕಣ್ಣುಗಳಲ್ಲಿ ಹರ್ಷಜಲವು ಉಕ್ಕಿಬಂತು; ಮೈ ಪುಳಕಾಂಕಿತವಾಯಿತು. ತಮ್ಮ ಕಷ್ಟವು ಪರಿಹಾರವಾಯಿತೆಂದು ಮನಸ್ಸಿನಲ್ಲಿ ಸಂತೋಷವುಂಟಾಯಿತು. 'ರಾಜಪುತ್ರಿಗೆ ಯೋಗ್ಯವರನನ್ನು ನೋಡಿ ನಿಶ್ಚಯಿಸುವಾಗ ಮಹಾರಾಜರು ಜೀವಿಸಿದ್ದಿದ್ದರೆ........' ಎಂಬ ಯೋಚನೆಯು ಬಂದು, ಕ್ಷಣಕಾಲ ಮನಸ್ಸು ತಲ್ಲಣಗೊಂಡು, 'ಹಾ! ನಾನು ದುರ್ದೈವಿ' ಎಂದುಕೊಂಡಳು. ನಾಲ್ಕು ದುಃಖಾಶ್ರು ಬಿಂದುಗಳೂ ಉದುರಿದುವು. ಮಹಾರಾಜರು ಮೃತರಾಗಿ ವಂಶಕ್ಕೊಂದು ಗಂಡು ದಿಕ್ಕಿಲ್ಲದೆ ತಾವು ಇಂದು ದಿಕ್ಕಿಲ್ಲದವರಂತೆ, ಎಲ್ಲಿಂದಲೋ ಬಂದ ಆ ಪರಪುರುಷರೆದುರಿಗೆ 'ಅನ್ಯಥಾ ಗತಿಯಿಲ್ಲ, ನೀವೇ ನಮಗೆ ದಿಕ್ಕು' ಎಂದು ಹೇಳಿಕೊಳ್ಳಬೇಕಾದ ವಿಧಿಯು ರಾಜಪತ್ನಿಯಾದ ತನಗೆ ಒದಗಿತಲ್ಲಾ;

ಎಂದು ಆ ಮಹಾರಾಣಿಯು ಬಹು ವ್ಯಥೆಪಟ್ಟಳು. ಅಂತಹ ತಮ್ಮ ಸ್ಥಿತಿ ಯಲ್ಲಿ, ಮಾಡಲು ಸಾಧ್ಯವೆಂದು ಉಳಿದಿರುವ ಆ ಒಂದು ಕಾರ್ಯವನ್ನು ಸ್ತ್ರೀಯಾದ ತಾನು ಸ್ವತಂತ್ರಿಸಿ ಮಾಡುತ್ತಿರುವುದಕ್ಕಾಗಿ ಅನುಮತಿ ಕೊಡ ಬೇಕೆಂದು ಮಹಾರಾಜರ ಚಿತ್ರಪಟದ ಸಮೀಪದಲ್ಲಿ ಬೇಡಿಕೊಂಡಳು. ಔರಸ ಸಂತತಿಯಿಂದ ಗತಿಗಾಣಲು ಎಡೆಯಿಲ್ಲದುದರಿಂದ ರಾಜ್ಯಕ್ಕೆ ಜಾಮಾತನಿಂದ ಲಾದರೂ ಗತಿಯನ್ನು ಕಲ್ಪಿಸದಿದ್ದರೆ ತೀರದೆಂದೂ, ಆ ವಿಚಾರವನ್ನು ಸನ್ನಿಧಿ ಯಲ್ಲಿ ವಿಜ್ಞಾಪಿಸಿ ಮುಂದೆ ಕಾರ್ಯತತ್ಪರಳಾಗುತ್ತೇನೆಂದೂ ಪ್ರಾರ್ಥಿಸಿ, ಪತಿಭಕ್ತಿ ಪರಾಯಣೆಯಾದ ಆ ಸಾಧ್ವೀಮಣಿಯು, ಅದೊಂದೇ ಯೋಗ್ಯ ಮಾರ್ಗವೆಂದು ನಿಶ್ಚಯಿಸಿದಳು. ಮತ್ತೆಮತ್ತೆ ಆಲೋಚಿಸಿ ಆ ಸಂದರ್ಭದಲ್ಲಿ ಆ ಮಾರ್ಗವನ್ನು ಬಿಟ್ಟರೆ ಬೇರೆ ಉಪಾಯವೇ ಇಲ್ಲವೆಂದು ನಿರ್ಧರಿಸಿದಳು. ಆ ದುರುಳನನ್ನು ಇರಿದು ರಾಜವಂಶದ ಮರ್ಯಾದೆಯನ್ನೂ ರಾಜಸಿಂಹಾಸನದ ಗೌರವವನ್ನೂ ಕಾಪಾಡುವ ಗುರುತರ ಕಾರ್ಯವು ಆ ಸಂದರ್ಭದಲ್ಲಿ ಬೇರೆ ಯಾರಿಂದಲೂ ಸಾಧ್ಯವಿಲ್ಲದುದರಿಂದ, ದೈವದತ್ತ ನಿಧಿಯಂತೆ ಬಂದು ಸಕಾಲಕ್ಕೆ ಒದಗಿರುವ ಆ ರಾಜಪುತ್ರರೇ–ನಮ್ಮ ರಾಜ್ಯಕ್ಕೆ ಪೈವೇಚ್ಛೆಯಿಂದ ಬಾಧ್ಯಸ್ಥರಾಗಿದ್ದಲ್ಲಿ ಅದನ್ನು ತಪ್ಪಿಸಲು ಯಾರಿಂದಲಾದೀತು ಎಂದೂ ತರ್ಕಿಸಿ ನಿಶ್ಚಯಮಾಡಿಕೊಂಡಳು.

ಒಡನೆಯೇ ಇನ್ನು ಸಾವಕಾಶಮಾಡಲಾಗದೆಂದು, ತಮ್ಮ ಆಪ್ತರಾದ ತಿಮ್ಮರಸ ಮತ್ತು ನಾರಣಯ್ಯ ಎಂಬಿಬ್ಬರು ಕರಣಿಕರುಗಳನ್ನು ಮೊದಲು ಹೋಗಿ ಬಂದ ಜಂಗಮಾರ್ಯನೊಂದಿಗೆ ಜೊತೆಮಾಡಿ, "ಅಯ್ಯಾ ಆಪ್ತ ಬಾಂಧವರೇ! ನೀವೀಗ ಮತ್ತೊಮ್ಮೆ ಭೈರವಾಲಯಕ್ಕೆ ನಡೆದು ಅಲ್ಲಿ ತಂಗಿರುವ ರಾಜಪುತ್ರರನ್ನು ಕಂಡು,–'ರಾಜಕುಟುಂಬವು ದುರ್ದೈವವಶವಾಗಿ ಹೀಗೆ ಕಷ್ಟಕ್ಕೆ ಸಿಕ್ಕಿದೆ; ತಾವು ಈಗ ಶೌರ್ಯಸಾಹಸಗಳಿಂದ ಶತ್ರುನಿಗ್ರಹ ಮಾಡಿ ರಾಜವಂಶವನ್ನು ಕಂಟಕದಿಂದ ಪಾರುಮಾಡಬೇಕು. ಅಷ್ಟಾದರೆ ಗುಣಮಣಿಯಾದ ರಾಜಪುತ್ರಿಯು ನಿಮ್ಮಲ್ಲೊಬ್ಬರನ್ನು ವರಿಸುವಳು; ಮುಂದೆ ಸಕಲ ಶ್ರೇಯಸ್ಸೂ ಉಂಟಾಗುವುದು. ಮಹಾರಾಣಿಯ ಈ ಮಾತು ಸತ್ಯ ವೆಂದು ನಂಬಬೇಕು' ಎಂದು ತಿಳಿಸಿ, ಅವರನ್ನು ಯೋಗ್ಯಗೌರವದಿಂದ ಗೋಪ್ಯವಾಗಿ ಅರಮನೆಗೆ ಕರೆತನ್ನಿರಿ" ಎಂಬುದಾಗಿ ತಿಳಿವಳಿಕೆ ಕೊಟ್ಟು

ಕಳುಹಿಸಿದಳು. ಜಂಗಮಾರ್ಯನು ಕರಣಿಕರನ್ನು ಹಿಂದಿಟ್ಟುಕೊಂಡು ಪುನಃ ಭೈರವಾಲಯಕ್ಕೆ ನಡೆದನು.

---

## ೪ ರಾಜಪತ್ನಿಯ ಸಂದೇಶ

ಜಂಗಮಾರ್ಯನು ಬಂದು ಮಹಾರಾಣಿಯವರ ಪರವಾಗಿ ತಮ್ಮ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋದುದು ಆ ರಾಜಕುಮಾರರಿಗೆ ಕೌತಕವನ್ನುಂಟುಮಾಡಿತು. ದೇವಿಯ ಆಲಯದಲ್ಲಿ ತಮಗಾದ ಕನಸಿನ ಒಂದೊಂದು ಮಾತೂ ಅಷ್ಟು ಶೀಘ್ರದಲ್ಲೇ ನಿದರ್ಶನಕ್ಕೆ ಬರುತ್ತಿರುವುದಕ್ಕಾಗಿ ಅವರು ಪರಮಾಶ್ಚರ್ಯಪಟ್ಟರು. ವಿಂಧ್ಯವಾಸಿನೀ ಮಹಾಮಾತೆಯು ಒಂದೊಂದು ಕ್ಷಣವೂ ತಮ್ಮ ಪರಾಮರ್ಶವನ್ನು ನೋಡಿಕೊಳ್ಳುತ್ತಿರುವಳೆಂದೂ ಆಕೆಯ ಕೃಪಾಕಟಾಕ್ಷದಿಂದ ತಮಗೆ ತಪ್ಪದೆ ಶುಭ ಫಲವುಂಟಾಗುವುದೆಂದೂ ಅವರಿಗೆ ಮೇಲೆ ಮೇಲೆ ಭರವಸೆಯುಂಟಾಯಿತು. ಆದರೆ ಜಂಗಮಾರ್ಯನು ಹೇಳಿದ ಮಾತಿನಿಂದ ರಾಜಕುಟುಂಬಕ್ಕೆ ಉಂಟಾಗಿರುವ ಕಷ್ಟದಲ್ಲಿ ತಮ್ಮ ಸಹಾಯವು ಹೇಗೆ ಆವಶ್ಯಕ? ಎಷ್ಟುಮಟ್ಟಿಗೆ? ತಾವು ಮುಂದೆ ಮಾಡಬೇಕಾದ ಕಾರ್ಯವೇನಿರಬಹುದು? ಎಂಬಿವೇ ಮುಂತಾದ ಯಾವ ಸಂಗತಿಯೂ ನಿಶ್ಚಯವಾಗಲಿಲ್ಲ. ಅದನ್ನು ಕುರಿತು ಸ್ವಲ್ಪ ಹೊತ್ತು ಮನಸ್ಸಿನಲ್ಲಿ ವಿಚಾರವುಂಟಾಯಿತು. ಆದರೆ ಉತ್ತರ ಕ್ಷಣದಲ್ಲೇ ಇದಕ್ಕೇಕೆ ಯೋಚನೆ? ವಿಂಧ್ಯಗಿರಿಯಿಂದ ನಮ್ಮನ್ನು ಇಲ್ಲಿಗೆ ಕರೆತಂದ ದೇವಿಯೇ ನಮ್ಮ ಮುಂದಿನ ಆಗು ಹೋಗುಗಳನ್ನೂ ನಿರ್ಧರಿಸುವಳು ಎಂದು ಸಂಪೂರ್ಣ ಭರವಸೆಯನ್ನೂ ಆ ಮಹಾಮಾತೆಯ ಪಾದಗಳಲ್ಲಿರಿಸಿ ನಿಶ್ಚಿಂತರಾಗಿದ್ದುಬಿಟ್ಟರು.

ರಮ್ಯವಾದ ಪ್ರಾತಃಕಾಲವು ಮನಸ್ಸಿಗೆ ಹರ್ಷದಾಯಕವಾಗಿರಲು ರಾಜಪುತ್ರರಿಬ್ಬರೂ ಕೆರೆಯ ನಿರ್ಮಲಜಲದಲ್ಲಿ ಸ್ನಾನಮಾಡಿ ಶುಭ್ರವಸ್ತ್ರಗಳನ್ನು ಧರಿಸಿ ಸಂಧ್ಯಾದಿಗಳನ್ನಾಚರಿಸಿದರು; ಸೂರ್ಯನಾರಾಯಣನನ್ನೂ ಭೈರವೇಶ್ವರನನ್ನೂ ಆರಾಧಿಸಿದರು. ಕೆರೆಗೆ ಬಂದವರೊಬ್ಬೊಬ್ಬರೂ ತಮ್ಮ ಆಕೃತಿ, ರಾಜಲಕ್ಷಣ, ಸಾಮಾನ್ಯರ ಇರುವಿಕೆಗೆ ಮೀರಿದ ತಮ್ಮ ಸ್ಥಿತಿ ಮತ್ತು

ಆ ಪರಿಸ್ಥಿತಿಯಲ್ಲಿ ತಾವಿರುವ ಸ್ಥಳ– ಇವುಗಳನ್ನು ಕುರಿತು ಆಶ್ಚರ್ಯಪಟ್ಟು ನೋಡುತ್ತಿರುವುದು, ಈ ಸಂಗತಿಗಳು ಆ ರಾಜಪುತ್ರರ ಮನಸ್ಸಿಗೆ ಬಹು ಸಂಕೋಚವನ್ನುಂಟು ಮಾಡಿದುವು. ಅಲ್ಲಿಂದ ಎಲ್ಲಾದರೊಂದು ಸರಿಯಾದ ಸ್ಥಳಕ್ಕೆ ಹೋಗಿ ತಂಗಬೇಕೆಂಬ ಯೋಚನೆಯೂ ತೋರಿತು. ಆದರೆ ರಾಜ ಗೃಹದಲ್ಲಿ ಕಾರ್ಯಗೌರವವನ್ನು ನಿರೀಕ್ಷಿಸಿ, ದೇವಿಯ ಆಜ್ಞೆಯಿಂದ ಅಲ್ಲಿಗೆ ಬಂದು ನಿಂತಿರುವ ತಾವು ಎಲ್ಲಿಗೆ ಹೋಗಿ ಬಿಡಾರಮಾಡುವುದು ಯುಕ್ತವಾಗಿದ್ದೀತು? ಅಥವಾ ಆಗ ಮುಂದೇನುಮಾಡುವುದು? ಏನೂ ತೋರಲಿಲ್ಲ. ಹಾಗೆಯೇ ಸ್ವಲ್ಪಹೊತ್ತು ಕಳೆಯಿತು.

ಅಷ್ಟರಲ್ಲಿ, ಮೊದಲು ಬಂದಿದ್ದ ಜಂಗಮಾರ್ಯನೂ, ಕರಣಿಕ ತಿಮ್ಮರಸನೂ ನಾರಣಯ್ಯನೂ ದೇವಾಲಯದೊಳಹೊಕ್ಕು ರಾಜಪುತ್ರರಿಗೆ ವಂದಿಸಿದರು. ಕರಣಿಕರು ರಾಜಪುತ್ರರ ದೇಹಸಂಪತ್ತಿಯನ್ನೂ ತೇಜಸ್ಸಿನಿಂದ ಕೂಡಿದ ಮುಖಮಂಡಲವನ್ನೂ ನೋಡಿ ಪರಮಾನಂದಪಟ್ಟರು. ತಮ್ಮ ದೇಶಕ್ಕೆ ಪ್ರಾಪ್ತನಾಗಿದ್ದ ಘೋರ ವಿಪತ್ತು ಆ ಕ್ಷತ್ರಿಯ ವೀರರ ಮೂಲಕ ನಿವಾರಣೆಯಾಗಿ, ಆಡಳಿತವು ಸುಭದ್ರವಾಗುವುದೆಂದು ಅವರ ಮನಸ್ಸಿಗೆ ನಂಬಿಕೆಯುಂಟಾಯಿತು. ಅವರು ತಮ್ಮ ರಾಜವಂಶವನ್ನು ಸಂರಕ್ಷಿಸಲು ಚಾಮುಂಡಾಂಬಿಕೆಯ ಅನುಗ್ರಹದಿಂದಲೇ ಪ್ರಾಪ್ತರಾಗಿರುವರೆಂದೂ ಅವರಲ್ಲಿ ರಾಜಕಾರ್ಯವನ್ನು ಕುರಿತು ಪ್ರಸ್ತಾಪ ಮಾಡುವುದು ಅಪಾಯಕರವಲ್ಲವೆಂದೂ ನಿರ್ಧರಿಸಿಕೊಂಡರು. ತರುವಾಯ, ದೇವಸ್ಥಾನಕ್ಕೆ ಒಮ್ಮೆ ಪ್ರದಕ್ಷಿಣೆಯಾಗಿ ಬಂದು, ಭೈರವೇಶ್ವರನಿಗೆ ನಮಸ್ಕರಿಸಿ, ರಾಜಪುತ್ರರ ಸಮ್ಮುಖದಲ್ಲಿ ಕುಳಿತು ತಾವು ಬಂದ ಕಾರ್ಯಗೌರವವನ್ನು ಕುರಿತು ಹೀಗೆ ಸಂಭಾಷಿಸತೊಡಗಿದರು.

ತಿಮ್ಮರಸ :–ಪ್ರಭೂತ್ತಮರೇ! ತಾವು ಇಲ್ಲಿಗೆ ದಯಮಾಡಿಸಿದುದು ಮಹಾರಾಣಿಯವರಿಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ. ಭಗವತೀ ಚಾಮುಂಡೇಶ್ವರಿಯೇ ತಮ್ಮನ್ನು ಪ್ರೇರಿಸಿ ಇಲ್ಲಿಗೆ ಕರೆತಂದಿದ್ದಾಳೆಂದು ಅವರು ಸಮಾಧಾನಗೊಂಡಿದ್ದಾರೆ. ಈವರೆಗೆಯೇ ನಮ್ಮ ಈ ಮಿತ್ರರು ತಮಗೆ ಸೂಕ್ಷ್ಮವಾಗಿ ತಿಳಿಸಿರುವಂತೆ, ರಾಜವಂಶಕ್ಕೆ ಪ್ರಾಪ್ತವಾಗಿರುವ ದುರಂತ ಕಷ್ಟವು ತಮ್ಮ ಭುಜಬಲ ಪರಾಕ್ರಮಗಳ ಬೆಂಬಲದಿಂದ ನಿವಾರಣೆಯಾಗ ಬಹುದೆಂದೂ ಅವರು ಭರವಸೆಗೊಂಡಿದ್ದಾರೆ.

ಯದುರಾಯರು:—ವಿಪ್ರವರ್ಯರೇ, ತಮ್ಮ ಮಾನ್ಯ ಮಹಾರಾಣಿ ಯವರಂತೆಯೇ ನಾವೂ ಸಹ ಈ ಕಾರ್ಯಕ್ಕೆ ಸೂತ್ರಧಾರಿಣಿಯು ಭಗವತೀ ಚಾಮುಂಡಾಂಬಿಕೆಯೆಂದೇ ಭಾವಿಸಿದ್ದೇವೆ. ನಮಗೆ ವಿಂಧ್ಯಗಿರಿಯಲ್ಲಿ ದೇವಿಯ ಆಜ್ಞೆಯಾದಂತೆ ಇಲ್ಲಿಗೆ ಬಂದೆವು. ಚಾಮುಂಡಾಂಬಿಕೆಯು ಈ ಗಿರಿಯಲ್ಲೂ ಸ್ವಪ್ನದಲ್ಲೇ ದರ್ಶನಕೊಟ್ಟು, ಈ ದೇವಾಲಯದಲ್ಲಿ ತಂಗಿದ್ದು ಮುಂದೆ ಏನಾಗುವುದೆಂಬುದನ್ನು ನಿರೀಕ್ಷಿಸಿರೆಂದು ಆಜ್ಞಾಪಿಸಿದಳು. ಹೀಗೆ ಒಂದೊಂದು ಕ್ಷಣವೂ ನಾವು ದೇವಿಯ ಅಪ್ಪಣೆಯಂತೆಯೇ ನಡೆಯುತ್ತ ಬಂದಿದ್ದೇವೆ. ಈ ರಾಜವಂಶದ ಸೇವೆಗೆ ನಮ್ಮ ಶರೀರವು ಮೀಸಲಾಗಿರಬೇಕೆಂಬುದು ಭಗವತಿಯ ಚಿತ್ತದಲ್ಲಿದ್ದರೆ, ಆ ಭಾಗದಲ್ಲಿ ನಾವು ಕೇವಲ ಆ ಮಹಾಮಾತೆಯ ಆಜ್ಞೆಯಂತೆ ನಡೆಯತಕ್ಕವರಲ್ಲದೆ ಅನ್ಯಥಾ ಇಲ್ಲ.

ನಾರಣಯ್ಯ:—ರಾಜೋತ್ತಮರೇ! ತಮ್ಮಂತೆಯೇ ಮಹಾರಾಣಿ ಯವರೂ ಈ ಕಾರ್ಯದಲ್ಲಿ ಹೆಜ್ಜೆಹೆಜ್ಜೆಗೂ, ಮಹಾಮಾತೆ ಚಾಮುಂ ಡಾಂಬಿಕೆಯ ಅನುಗ್ರಹ ಆಶೀರ್ವಾದಗಳನ್ನು ಪ್ರತ್ಯಕ್ಷ ಕಾಣುತ್ತಿದ್ದಾರೆ. ಹೀಗೆ ಉಭಯರಿಗೂ ಏಕಕಾಲದಲ್ಲಿ ಒಂದೇ ಬಗೆಯ ಪ್ರೇರಣೆಯಾಗುತ್ತಿರು ವುದನ್ನು ನೋಡಿದರೆ, ಈ ರಾಜವಂಶದ ಪುನರುಜ್ಜೀವನ ಕಾರ್ಯವೂ ನಮ್ಮ ದೇಶದ ಅಭಿವೃದ್ಧಿಯೂ ಅಮ್ಮನವರ ಕಟಾಕ್ಷಕ್ಕೆ ಒಳಪಟ್ಟಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ದೈವಾನುಕೂಲವಿದೆಯೆಂಬುದು ಇಷ್ಟು ಮಟ್ಟಿಗೆ ದೃಢಪಟ್ಟಿರುವಾಗ, ಆವಶ್ಯಕವಿರುವಷ್ಟು ಪುರುಷ ಪ್ರಯತ್ನವನ್ನೂ ಮಾಡಿ, ರಾಜ್ಯಕ್ಕೆ ಸಂಭವಿಸಿರುವ ಗಂಡಾಂತರವನ್ನು ನೀಗಿಸಬೇಕಾದುದು ಈಗ ನಮ್ಮ ಮುಖ್ಯ ಕರ್ತವ್ಯವಾಗಿದೆ.

ಯದುರಾಯರು:—ಮಹನೀಯರೇ! ದುರ್ದೈವದಿಂದ ರಾಜ್ಯಕ್ಕೆ ಈಗ ಒದಗಿರುವ ಗಂಡಾಂತರವೇನೆಂಬುದನ್ನು ಜಂಗಮಾರ್ಯರು ಸೂಕ್ಷ್ಮವಾಗಿ ತಿಳಿಸಿದ್ದಾರೆ. ಅದನ್ನು ಇನ್ನೂ ಸ್ವಲ್ಪ ಸ್ಪಷ್ಟವಾಗಿಯೂ ವಿಶದವಾಗಿಯೂ ತಿಳಿಸಬೇಕೆಂದು ಕೋರುತ್ತೇನೆ.

ತಿಮ್ಮರಸಯ್ಯ:—ಪ್ರಭುವರ್ಯರೇ! ಇಲ್ಲಿಯ ಅರಸರು ಪುತ್ರಸಂತಾನ ವಿಲ್ಲದೆ ಸ್ವರ್ಗಸ್ಥರಾದರೆಂಬ ಸಂಗತಿಯು ತಿಳಿದಿದೆಯಲ್ಲವೆ? ವಿವಾಹ ಯೋಗ್ಯ ವಯಸ್ಕಳಾದ ರಾಜಪುತ್ರಿಯೊಂದಿಗೆ ಮಹಾರಾಣಿಯವರು ಏಕಾಂಗಿಯಾಗಿ

ರಾಜ್ಯಭಾರ ಮಾಡುತ್ತಿರುವುದು ಹಲವು ಮಂದಿ ದುರುಳರ ಕಣ್ಣು ಕುಕ್ಕುತ್ತಿದೆ. ಅಂತಹ ದುರುಳರಲ್ಲಿ ಮಾರನಾಯಕನೆಂಬುವನು ಅತ್ಯಂತ ಪ್ರಬಲನಾಗಿದ್ದಾನೆ. ದಳವಾಯಿ ಪದವಿಯಲ್ಲಿದ್ದ ಆತನು ಮಹಾರಾಜರ ಮರಣಾನಂತರ ಸೈನ್ಯವನ್ನೆಲ್ಲಾ ಬಹು ಸುಲಭವಾಗಿ ಪ್ರೇರೇಪಿಸಿ ತನ್ನ ಪರವಾಗಿ ಮಾಡಿಕೊಂಡು ದೇಶವನ್ನೇ ಆಕ್ರಮಿಸಬೇಕೆಂದು ಹವಣಿಸಿದ್ದಾನೆ. ಅಷ್ಟುಮಾತ್ರವಲ್ಲ; ರಾಜಕುಮಾರಿಯನ್ನೂ ತನಗೆ ಲಗ್ನಮಾಡಿ ಕೊಡಬೇಕೆಂದು ಪೀಡಿಸಲಾರಂಭಿಸಿದ್ದಾನೆ. ರಾಜಪತ್ನಿಯು ಒಳ್ಳೆಯ ಮಾತಿನಿಂದ ತನ್ನ ಇಷ್ಟಕ್ಕೆ ಅನುಸಾರವಾಗಿ ನಡೆಯದಿದ್ದರೆ ರಾಜಪುತ್ರಿಯನ್ನು ಬಲಾತ್ಕಾರದಿಂದ ಅಪಹರಿಸಲೂ ಸಿದ್ಧನಾಗಿದ್ದಾನೆ. ಅವನ ಕಾಟವು ಕ್ಷಣ ಕ್ಷಣಕ್ಕೂ ಅಸಹನೀಯವಾಗುತ್ತಿದೆ. ಮೂರು ದಿನಗಳ ಅವಧಿಯನ್ನುಕೊಟ್ಟು, ಅಷ್ಟರೊಳಗಾಗಿ ರಾಜಪುತ್ರಿಯನ್ನು ಒಪ್ಪಿಸದಿದ್ದರೆ, ಅರಮನೆಯನ್ನು ಹೊಕ್ಕು ಬಲಾತ್ಕಾರದಿಂದ ಆಕೆಯನ್ನು ಸೆಳೆದೊಯ್ದು ಮದುವೆಯಾಗುವೆನೆಂದೂ ಭಯ ಹುಟ್ಟಿಸಿದ್ದಾನೆ. ದುರುಳನೂ ಧರ್ಮಬಾಹಿರನೂ ಕೃತಘ್ನನೂ ಧೂರ್ತನೂ ಆದ ಆ ದುರಾತ್ಮನ ಸೈನ್ಯಬಲ, ಕ್ರೌರ್ಯಗಳಿಗೆ ಮಹಾರಾಣಿಯವರು ಬಹು ಬೆದರಿ ತಲ್ಲಣಗೊಂಡಿದ್ದಾರೆ. ಅವನನ್ನು ನಿಗ್ರಹಿಸಿ ರಾಜವಂಶದ ಮಾನಸಂರಕ್ಷಣೆಮಾಡಬೇಕಾದುದು ಇಂದು ಪ್ರಥಮ ಕರ್ತವ್ಯವಾಗಿದೆ. ಅಷ್ಟು ಮಾತ್ರ ಕಾರ್ಯವು ತಮ್ಮಿಂದ ಆಗಬಹುದೆಂದು ಮಹಾರಾಣಿಯವರು ಭರವಸೆಗೊಂಡಿದ್ದಾರೆ.

ಈ ಮಾತುಗಳು ಕಿವಿಗೆ ಬಿದ್ದೊಡನೆಯೇ ರಾಜಪುತ್ರರು ಕಿಡಿ ಕಿಡಿಯಾದರು. ರಾಜಭಂಡಾರದಿಂದ ತನ್ನ ಜೀವನಕ್ಕೆ ವೇತನಪಡೆದು, ಆ ನೀಚನು ಹೀಗೆ ಉಪ್ಪುಂಡ ಮನೆಗೆ ಎರಡೆಣಿಸುವ ಘಾತುಕಕಾರ್ಯ ಮಾಡಲೆಣಿಸಿದ್ದು ಅವರಿಗೆ ಕೋಪೋದ್ರೇಕವನ್ನುಂಟು ಮಾಡಿತು. ತರುಣ ರಾಜಪುತ್ರ ಕೃಷ್ಣರಾಯನು ಒಡನೆಯೇ ಖಡ್ಗವನ್ನು ಒರೆಯಿಂದ ಹೊರಕ್ಕೆಳೆದು, "ಎಲ್ಲಿ! ಆ ಖೂಳನು ಎಲ್ಲಿ ಅಡಗಿರುವನೆಂದು ತಿಳಿಸಿರಿ. ಮೊದಲು ಅವನ ತಲೆಯನ್ನು ನೆಲಕ್ಕುರುಳಿಸಿ ತರುವಾಯ ಮುಂದಿನ ಕೆಲಸಮಾಡೋಣ" ಎಂದು ಗರ್ಜಿಸಿದನು.

ಯದುರಾಯರು, ಅದು ಕೋಪಕ್ಕೆ ಸಮಯವಲ್ಲವೆಂದೂ ಹಾಗೆ ದುಡುಕಬಾರದೆಂದೂ ತಮ್ಮನನ್ನು ಸಮಾಧಾನಗೊಳಿಸಿ ಕರಣಿಕರನ್ನು ಕುರಿತು,

"ಅಯ್ಯಾ ಬ್ರಾಹ್ಮಣೋತ್ತಮರೇ! ಭೂಭಾರಕರಾದ ಅಂತಹ ಖೂಳರನ್ನು ಹುಡುಕಿ ಹುಡುಕಿ ಸಂಹರಿಸಿ ಪ್ರಜಾಕ್ಷೇಮವನ್ನು ನೆಲೆಗೊಳಿಸಬೇಕಾದುದೇ ಕ್ಷತ್ರಿಯರಾಗಿ ಹುಟ್ಟಿದ ನಮ್ಮ ಕುಲಧರ್ಮವು. ಈ ಕಾರ್ಯವನ್ನು ನಾವು ಮಾಡಿದರೆ ಸ್ವಧರ್ಮವನ್ನು ನೆರವೇರಿಸಿದಂತಾಯಿತಲ್ಲದೆ ಹೆಚ್ಚೇನೂ ಅಲ್ಲ. ಅದು ಇಲ್ಲಿಯ ರಾಜಕುಟುಂಬಕ್ಕೆ ಉಪಕಾರವಾಗಿಯೂ ಪರಿಣಮಿಸಿದರೆ ಸಂತೋಷವೇ ಆಯಿತು" ಎಂದು ಸ್ಪಷ್ಟವಾಣಿಯಿಂದ ನುಡಿದರು.

ಕೃಷ್ಣರಾಯನ ವೀರ ವಾಕ್ಯೂ, ಕಣ್ಣು ಕೋರೈಸುವಂತೆ ಥಳಥಳಿಸಿದ ಆತನ ಖಡ್ಗವೂ ಯದುರಾಯರ ಧರ್ಮಸಮ್ಮತವಾದ ನಿಗರ್ವಿ ವಚನವೂ, ಕರಣಿಕರಿಬ್ಬರ ಮನಸ್ಸಿನಲ್ಲೂ ವಿಶೇಷ ವಿಶ್ವಾಸವನ್ನುಂಟು ಮಾಡಿದುವು. ಅಲ್ಲದೆ, ಧೀರೋದಾತ್ತನಾಯಕರಾದರೂ ಆ ರಾಜಪುತ್ರರಲ್ಲಿ ಕಂಡುಬರುತ್ತಿದ್ದ ಔದಾರ್ಯ ಗಾಂಭೀರ್ಯಗಳೂ ಸದ್ಗುಣ ಸೌಶೀಲ್ಯಗಳೂ ಅವ..ನ್ನು ಮೆಚ್ಚಿಸಿದುವು. ತಮ್ಮ ನಾಡಿಗೆ ಒದಗಲಿರುವ ಸೌಭಾಗ್ಯಪರಂಪರೆಯ ಒಂದು ಸೂಚನೆಯು ಅವರ ಕಣ್ಣುಗಳಿಂದ ನಾಲ್ಕುಬಿಂದು ಹರ್ಷಜಲವನ್ನು ಉದುರಿಸಿತು. ಆವರೆಗೆ ಸುಮ್ಮನೆ ಕುಳಿತು ಇದನ್ನೆಲ್ಲ ಕೇಳುತ್ತಿದ್ದ ಜಂಗಮಾರ್ಯನು, "ಪ್ರಭುಗಳೇ! ಮುಂದೆ ಹೇಳಬೇಕಾದುದೇನಿದೆ? ತಾವು ತಮ್ಮ ಶೌರ್ಯ ಧೈರ್ಯ ಪರಾಕ್ರಮಾದಿಗಳಿಂದ ಆ ನೀಚನನ್ನು ವಧಿಸಿದಿರೆಂದರೆ ರಾಜಪುತ್ರಿಯು ತಮ್ಮಲ್ಲೊಬ್ಬರನ್ನು ತಪ್ಪದೆ ವರಿಸುವಳು, ಎಂದು ಮಹಾರಾಣಿಯವರು ಆಶ್ವಾಸನ ಕೊಟ್ಟಿದ್ದಾರೆ. ಅವರ ಈ ಮಾತನ್ನು ಸತ್ಯವೆಂದು ತಾವು ನಂಬತಕ್ಕದ್ದು" ಎಂದು ಸ್ಪಷ್ಟಗೊಳಿಸಿದನು.

"ರಾಜಪುತ್ರಿಯ ಪಾಣಿಗ್ರಹಣಮಾಡಿದವರು ರಾಜ್ಯಲಕ್ಷ್ಮಿಗೂ ಒಡೆಯರಾಗುವರೆಂದು ಹೇಳಬೇಕಾದುದೇ ಇಲ್ಲವಷ್ಟೆ! ಅಷ್ಟಾದರೆ, ಮಹಾರಾಣಿಯವರ ಇಷ್ಟಾರ್ಥವೆಲ್ಲ ನೆರವೇರಿದಂತಾಗುತ್ತದೆ. ತಾವು ಈ ಪುರಾತನ ರಾಜವಂಶಕ್ಕೆ ಬಂದೊದಗಿದ ಈ ಆಪತ್ತನ್ನು ಪರಿಹರಿಸಿ ಚಾಮುಂಡಾಂಬಿಕೆಯ ಪರಿಪೂರ್ಣಾನುಗ್ರಹಕ್ಕೆ ಪಾತ್ರರಾಗಿರಿ. ಪುತ್ರಪೌತ್ರಾದಿಗಳಿಂದ ಗೋತ್ರಾಭಿವೃದ್ಧಿಹೊಂದಿ ಈ ಭರತಖಂಡದಲ್ಲಿ ಸಹಸ್ರಾರು ಕಾಲ ಯಶಶ್ಶರೀರಿಗಳಾಗಿರಬೇಕೆಂಬುದೇ ಭಗವತಿಯ ಸನ್ನಿಧಿಯಲ್ಲಿ ನಮ್ಮ ಪ್ರಾರ್ಥನೆ" ಎಂದು ತಿಮ್ಮರಸನು ನುಡಿದನು.

ಅಷ್ಟರಲ್ಲಿ ನಾರಣಯ್ಯನು ಏನೋ ಜ್ಞಾಪಿಸಿಕೊಂಡು, "ಪ್ರಭುಗಳೇ! ತಮ್ಮ ವಂಶದ ಗೋತ್ರವು ಯಾವದೆಂದು ಅಪ್ಪಣೆ ಕೊಡಿಸಬೇಕು; ಇಲ್ಲಿಯ ರಾಜವಂಶಜರು ಗೌತಮ ಗೋತ್ರೋತ್ಪನ್ನರು" ಎಂದನು. ಆಗ ಯದು ರಾಯರು ಹಸನ್ಮುಖದಿಂದ, "ವಿಪ್ರವರ್ಯರೇ! ನಾವು ಆತ್ರೇಯಸ ಗೋತ್ರೋತ್ಪನ್ನರು, ಋಗ್ಶಾಖಾನುವರ್ತಿಗಳು" ಎಂದು ಪ್ರತ್ಯುತ್ತರವಿತ್ತರು. ಕರಣಿಕರ ಮನಸ್ಸಿನ ಆ ಒಂದು ಸಂಶಯವೂ ನಿವಾರಣೆಯಾಯಿತು. ಹೀಗೆ ರಾಜಪತ್ನಿಯ ಸಂದೇಶವನ್ನು ಬಿನ್ನವಿಸಿ ಕೃತಕೃತ್ಯರಾದ ಕರಣಿಕರು "ಹಾಗಾದರೆ, ಇನ್ನು ವಿಳಂಬವೇಕೆ? ಅರಮನೆಯ ಬಿಡದಿಗೆ ದಯಮಾಡಿಸಬಹುದಲ್ಲ" ಎಂದು ಕೇಳಿಕೊಂಡರು.

---

## ೫ ವಿಜಯ ತಾಂಬೂಲ

"ಇನ್ನು ಮೂರು ದಿನಗಳೊಳಗಾಗಿ ರಾಜಪುತ್ರಿಯನ್ನು ನನ್ನ ವಶಪಡಿಸದಿದ್ದರೆ ಬಲಾತ್ಕಾರದಿಂದ ಸೆಳೆದೊಯ್ಯುವೆನು" ಎಂದು ಕ್ರೂರ ಮಾರ ನಾಯಕನು ರಾಜಪತ್ನಿ ದೇವಾಜಮ್ಮಣ್ಣಿಗೆ ತಿಳಿಸಿದ್ದನಷ್ಟೆ? ಅಂದೇ ಎರಡನೆಯ ದಿನ. ಆ ಮೂರು ದಿನಗಳನ್ನಾದರೂ ತಡೆದು ನೋಡುವಷ್ಟು ಸಮಾಧಾನಗೊಳ್ಳದೆ, ಆ ಧೂರ್ತನು ಆ ದಿನವೇ ರಾಜಧಾನಿಯ ಮೇಲೆ ಧಾಳಿ ಮಾಡಲು ನಿಶ್ಚಯಿಸಿದ್ದನು. ರಾಜಧಾನಿಯ ಮಹಾದ್ವಾರದಲ್ಲಿ ತನ್ನ ಕಡೆಯ ದೂತರನ್ನು ಕಾವಲಿಟ್ಟು ಮಹಾರಾಣಿಯ ಕಡೆಯವರು ಹೊರಕ್ಕೆ ಹೋಗಲೂ ಒಳಕ್ಕೆ ಬರಲೂ ನಿರ್ಬಂಧವನ್ನುಂಟುಮಾಡಿದನು; ಹೊಸಬರು ಯಾರನ್ನೂ ಕೋಟೆಯೊಳಕ್ಕೆ ಬಿಡಲಾಗದೆಂದು ಕಟ್ಟಪ್ಪಣೆಮಾಡಿದನು. ರಾಜಪುತ್ರಿಯನ್ನು ಎಷ್ಟು ಜಾಗ್ರತೆಯಾಗಿ ಅಪಹರಿಸೇನು? ಎಷ್ಟು ಶೀಘ್ರವಾಗಿ ಆಕೆಯನ್ನು ತನ್ನ ಮಡದಿಯನ್ನಾಗಿ ಮಾಡಿಕೊಂಡೇನು? ಎಂದೇ ಅವನ ಪಾಪಿ ಹೃದಯವು ಸದಾ ತಳಮಳಗೊಳ್ಳುತ್ತಿತ್ತು. ಅಷ್ಟು ಮಾತ್ರವೇ ಅಲ್ಲ; ರಾಜವಂಶಕ್ಕಿರುವ ದಿಕ್ಕೆಂದರೆ ಈ ರಾಜಪುತ್ರಿಯೊಬ್ಬಳೇ! ಇವಳನ್ನು ತಾನು ಅಪಹರಿಸಿ ಮದುವೆಯಾಗಿ ರಾಜಪತ್ನಿಯನ್ನು ಸೆರೆಯಲ್ಲಿಟ್ಟುಬಿಟ್ಟರೆ, ಅಥವಾ

ಸಂಹರಿಸಿ ಬಿಟ್ಟರೆ, ಮುಂದೆ ಮೈಸೂರು ರಾಜ್ಯದ ಆಡಳಿತವೆಲ್ಲ ತನ್ನ ಅಧಿಕಾರಕ್ಕೇ ಒಳಪಡುವುದು; ತಾನು ಮಹಾರಾಜನೆಂದು ಸಿಂಹಾಸನವನ್ನೇರಿ ಕಿರೀಟವನ್ನಿಟ್ಟುಕೊಂಡು ಮೆರೆಯಬಹುದು ಎಂದು ಅವನು ಮನಸ್ಸಿನಲ್ಲೇ ಹಲವು ಮಂಡಿಗೆಗಳನ್ನು ಮಾಡಿಕೊಂಡು ಸವಿದಿದ್ದನು. ಅವನು ಇಟ್ಟಿದ್ದ ಮೂರು ದಿನಗಳ ಗಡುವೂ ಅವನಿಗೆ ಬಹು ಸಾವಕಾಶವೆಂದು ತೋರಿತು. ಆದುದರಿಂದಲೇ ಆ ಎರಡನೆಯ ದಿನದ ಬೆಳಿಗ್ಗೆಯೇ ಕೋಟೆಯ ಬಾಗಿಲಲ್ಲಿ ತನ್ನ ಭಟರನ್ನು ನಿಯಮಿಸಿ, ಹೋಗಿ ಬರುವ ಜನರಿಗೆ ನಿರ್ಬಂಧವನ್ನು ಉಂಟು ಮಾಡಿದ್ದನು.

ಕೋಟೆಯ ಬಾಗಿಲಲ್ಲಿ ಪಹರೆಯವರಿದ್ದುದು ಕರಣಿಕರಿಗೂ, ಜಂಗಮಾರ್ಯನಿಗೂ ವಿಶೇಷ ಆಶ್ಚರ್ಯವನ್ನುಂಟು ಮಾಡಿತು. "ನಾವು ಅರಮನೆಯಿಂದ ಭೈರವಾಲಯಕ್ಕೆ ಹೋಗುವಾಗ ಕಾವಲಿನವರು ಯಾರೂ ಇರಲಿಲ್ಲ; ಬರುವ ವೇಳೆಗಾಗಲೇ ಇವರೆಲ್ಲಿಂದ ಬಂದರು?" ಎಂದು ಅವರೆಂದುಕೊಂಡರು. ತಾವು ಕರೆತಂದಿದ್ದ ರಾಜಪುತ್ರರೊಂದಿಗೆ ಸ್ವಾಭಾವಿಕವಾಗಿ ಒಳಹೊಗಲು ಯತ್ನಿಸಿದರು. ನಡುವಿನಲ್ಲಿ ದೀರ್ಘವಾದ ಒರೆಯಿಂದ ಕೂಡಿದ ಕತ್ತಿ, ಬಿಲ್ಲು ಬಾಣಗಳು, ತೀಕ್ಷ್ಣವಾದ ಭಲ್ಯೆ– ಇವುಗಳನ್ನು ಧರಿಸಿದ್ದ ಆ ಆಜಾನುಬಾಹು ವ್ಯಕ್ತಿಗಳನ್ನು ಕಂಡ ಕಾವಲಿನವರು, ಇವರು ಯಾರೋ ಹೊಸಬರು, ಶತ್ರುಗಳು ಎಂದು ತಿಳಿದು, 'ಕೋಟೆಯೊಳಕ್ಕೆ ಬರಕೂಡದು' ಎಂದು ನಿರ್ಬಂಧಗೊಳಿಸಿದರು. ಈ ಭಟರು ಯಾರ ಕಡೆಯವರೆಂದು ರಾಜಪುತ್ರರು ಕರಣಿಕರನ್ನು ಪ್ರಶ್ನೆಮಾಡಲು, ಅದು ಆ ಮಾರನಾಯಕನ ಪುಂಡತನವೇ ಎಂದು ಗೊತ್ತಾಯಿತು. ಒಡನೆಯೇ ರಾಜಪುತ್ರರೂ ಅವರೊಂದಿಗೆ ಕರಣಿಕರೂ ಕಾವಲಿನ ಭಟರನ್ನು ಲಕ್ಷ್ಯಮಾಡದೆಯೇ ಒಳಹೊಗಲು ಸಿದ್ಧರಾದರು. ಅದನ್ನು ಕಂಡು ಭಟರು ಮುಂದಕ್ಕೆ ನುಗ್ಗಿಬಂದು, ಆ ನಾಲ್ವರನ್ನೂ ಕೈಯಿಂದ ತಳ್ಳಿಯೂ ಕೀಳು ಭಾಷೆಯಿಂದ ನಿಂದಿಸಿಯೂ ಒಳಹೊಗಕೂಡದೆಂದು ತಡೆಗಟ್ಟಿದರು.

ಬಿಸಿ ನೆತ್ತರದ ಆ ಕ್ಷತ್ರಿಯ ವೀರರಿಗೆ ಆ ಭಟರು ತಮ್ಮ ಮೈಮುಟ್ಟಿ ತಳ್ಳಿದುದೂ, ಸಣ್ಣಮಾತುಗಳಿಂದ ನಿಂದಿಸಿದುದೂ ಸಹಿಸಲಾರದಷ್ಟು ಕೋಪವನ್ನುಂಟುಮಾಡಿತು. ಒಡನೆಯೇ ಕೃಷ್ಣರಾಯನು ತನ್ನ ಖಡ್ಗವನ್ನು

ಒರೆಯಿಂದ ಹೊರಕ್ಕೆಳೆದು, ಒಬ್ಬ ಭಟನನ್ನು ಅದಕ್ಕೆ ಬಲಿಯಾಗಿಸಿದನು. ಮತ್ತೊಬ್ಬನು ಮೇಲೆ ನುಗ್ಗಿಬರಲು ಅವನಿಗೂ ಕತ್ತಿಯ ಪೆಟ್ಟಿನ ರುಚಿ ತಾಕಿ ಕೈ ಅರ್ಧ ಕತ್ತರಿಸಿಹೋಯಿತು. ಆ ಭಯಂಕರ ದೃಶ್ಯವನ್ನು ಕಂಡು ಮುಂದೆ ಅವರ ತಂಟೆಗೆ ಬರಲು ಹೆದರಿ ಕಾವಲಿನ ಭಟರೆಲ್ಲ ಪಲಾಯನ ಮಾಡಿದರು. ರಾಜಪುತ್ರರೂ ಕರಣಿಕರೂ ಕೋಟೆಯ ಮಹಾದ್ವಾರವನ್ನು ಹೊಕ್ಕು ನಗರದ ವಿಸ್ತಾರವನ್ನೂ ಕಟ್ಟಡಗಳ ಅಂದಚೆಂದಗಳನ್ನೂ ನೋಡುತ್ತ ಸಾಲುಗೇರಿಗಳಲ್ಲಿ ನಡೆದು ಅರಮನೆಯನ್ನು ಸಮೀಪಿಸಿದರು. ಪುಂಡ ಮಾರನಾಯಕನ ಕಡೆಯ ಭಟರನ್ನು ಲೇಶಮಾತ್ರವೂ ಭಯವಿಲ್ಲದೆ ಕತ್ತರಿಸಿ ಕೆಡಹಿದ ಇವರು ಯಾರೋ ವೀರಾಧಿವೀರರೆಂದು ಪಟ್ಟಣದ ಜನರೆಲ್ಲರೂ ಅವರನ್ನು ಭಯದಿಂದಲೂ ಆಶ್ಚರ್ಯದಿಂದಲೂ ನೋಡುತ್ತ, ಅವರ ಆಕಾರ ಲಕ್ಷಣ ತೇಜಸ್ವಿತೆಗಳಿಗಾಗಿ ಸಂತೋಷಪಟ್ಟರು.

ತಿಮ್ಮರಸನು ಮುಂಚಿತವಾಗಿ ಅರಮನೆಯನ್ನು ಹೊಕ್ಕು ಮಹಾರಾಣಿಯನ್ನು ಕಂಡು ವಂದಿಸಿ ರಾಜಪುತ್ರರನ್ನು ಕರೆತಂದಿರುವ ವೃತ್ತಾಂತವನ್ನೂ, ಕೋಟೆಯ ಬಾಗಿಲಲ್ಲಿ ತಮ್ಮನ್ನು ತಡೆಗಟ್ಟಿದ ಮಾರನಾಯಕನ ಭಟರನ್ನು ಅವರು ನಿಗ್ರಹಿಸಿದ ಸಂಗತಿಯನ್ನೂ ಅರಿಕೆ ಮಾಡಿದನು. ಇತ್ತ, ಅವರ ಜೊತೆಗಿದ್ದ ನಾರಣಯ್ಯನು ಅವರನ್ನು ಒಂದು ಭವ್ಯವಾದ ಬಿಡದಿಯ ಮನೆಗೆ ಕರೆದೊಯ್ದು ವಿಶ್ರಮಿಸಿಕೊಳ್ಳಲು ಸಕಲವನ್ನೂ ಅಣಿಮಾಡಿದನು. ಅಷ್ಟರಲ್ಲಿ ಮಹಾರಾಣಿಯ ಅಪ್ಪಣೆಯಿಂದ, ಅವರ ಫಲಾಹಾರಕ್ಕೆಂದು ದಿವ್ಯ ಭಕ್ಷ್ಯಭೋಜ್ಯಗಳಿಂದ ಕೂಡಿದ ರಾಜಯೋಗ್ಯವಾದ ಎಡೆಗಳನ್ನು ಪಾಕಶಾಲೆಯ ಸೇವಕರು ತಂದಿಟ್ಟರು. ರಾಜಪುತ್ರರು ಉಪಾಹಾರಮಾಡಿ, ತಾಂಬೂಲವನ್ನು ಸೇವಿಸಿ, ಸಂತೋಷಪಟ್ಟು ವಿಶ್ರಮಿಸಿಕೊಳ್ಳುತ್ತಿರಲು, ಕರಣಿಕರು ಅವರನ್ನು ರಾಜಗೃಹಕ್ಕೆ ಕರೆದೊಯ್ಯಲು ಬಂದು, ದಯಮಾಡಿಸಬೇಕೆಂದು ಕೇಳಿಕೊಂಡರು.

ಯದುರಾಯ ಕೃಷ್ಣರಾಯರಿಬ್ಬರೂ ಕರಣಿಕರು ಕರೆದೊಯ್ದ ಗುಪ್ತದ್ವಾರದಿಂದ ರಾಜಗೃಹವನ್ನು ಪ್ರವೇಶಿಸಿದರು. ಅಂತಃಪುರದ ಪಕ್ಕದಲ್ಲಿದ್ದ ಒಳಮಹಲಿನಲ್ಲಿ ಅವರನ್ನು ದಿವ್ಯಪೀಠಗಳ ಮೇಲೆ ಕುಳ್ಳಿರಿಸಿ ಮಹಾರಾಣಿಯವರಿಗೆ ಆ ಸಂಗತಿಯನ್ನು ಅರಿಕೆಮಾಡಿದರು. ಸ್ವಲ್ಪ ಹೊತ್ತಿನೊಳಗಾಗಿಯೇ

ತೆರೆಯ ಒಳಗಡೆ ಅವ್ವೆಯರು ಪರಾಕುಹೇಳುತ್ತ ಮಹಾರಾಣಿಯವರನ್ನು ಕರೆತಂದು ಪೀಠದ ಮೇಲೆ ಕುಳ್ಳಿರಿಸಿದ ಸೂಚನೆಯು ತಿಳಿಯಿತು. ಕರಣಿಕರು ತೆರೆಯಿಂದ ಹೊರಕ್ಕೆ ಬಂದು, ಮಹಾಮಾತೃಶ್ರೀಯವರು 'ರಾಜಪುತ್ರರಿಗೆ ಸುಖಾಗಮನವೇ' ಎಂದು ಬೆಸಗೊಂಡರೆಂದು ವಿಜ್ಞಾಪಿಸಿದರು. ತೆರೆಯೊಳಗಿನಿಂದ ಒಂದು ಮಧುರ ಸ್ವರವು ಹೊರಟು ರಾಜಪುತ್ರರ ಕಿವಿಗಳನ್ನು ಸೋಕಿತು.

........:—"ರಾಜಕುಲ ಶಿರೋಮಣಿಗಳಿಗೆ ವಿಜಯವಾಗಲಿ! ಬಹು ದೂರದ ತಮ್ಮ ದೇಶದಿಂದ ಇಲ್ಲಿಯವರೆಗೆ ಸುಖಪ್ರಯಾಣ ಬೆಳೆಸಿ ಮಹಾಮಾತೆ ಚಾಮುಂಡೇಶ್ವರಿಯ ಅನುಗ್ರಹದಿಂದ ತಾವು ಇಂದು ಇಲ್ಲಿಗೆ ದಯಮಾಡಿಸಿದುದು ನಮ್ಮ ಪುಣ್ಯೋದಯದಿಂದಲೇ ಎಂದು ಭಾವಿಸಿದ್ದೇವೆ. ತಮ್ಮ ವಂಶೋನ್ನತಿಯನ್ನೂ ಶೌರ್ಯ ವೀರ್ಯ ಪರಾಕ್ರಮಗಳ ವಿಚಾರವನ್ನೂ ಕರಣಿಕರ ಮುಖದಿಂದ ಕೇಳಿ ಹರ್ಷಗೊಂಡಿದ್ದೇವೆ. ದುರ್ದೈವದಿಂದ ರಾಜಕುಟುಂಬಕ್ಕೆ ಒದಗಿರುವ ದುರಂತ ಕಷ್ಟವನ್ನು ಪರಿಹರಿಸಲು ಸಮರ್ಥರಾದ ತಮ್ಮನ್ನು ಆ ಜಗನ್ಮಾತೆಯೇ ಇಲ್ಲಿಗೆ ಕರೆತಂದಿದ್ದಾಳೆಂದು ನಂಬಿದ್ದೇವೆ."

ಯದುರಾಯರು "ಮಹಾರಾಣಿಯವರು ಇನ್ನು ಚಿಂತಿಸಬೇಕಾದುದಿಲ್ಲ. ರಾಜಕುಟುಂಬಕ್ಕೆ ಸಂಭವಿಸಿರುವ ಸಂಕಟವೇನೆಂಬುದನ್ನು ನಾವು ಸೂಕ್ಷ್ಮವಾಗಿ ತಿಳಿದಿದ್ದೇವೆ; ನಮ್ಮ ಸರ್ವಶಕ್ತಿಯಿಂದಲೂ ದುಷ್ಟರನ್ನು ಶಿಕ್ಷಿಸಿ, ಬಂದಿರುವ ಆಪತ್ತನ್ನು ಪರಿಹರಿಸಿ, ತಮ್ಮ ಪಾದಸೇವೆಯನ್ನು ಮಾಡುವುದೇ ನಮ್ಮ ಪ್ರಥಮ ಕರ್ತವ್ಯವೆಂದು ಭಾವಿಸಿದ್ದೇವೆ; ಈ ಕಾರ್ಯವನ್ನು ನಾವು ಚಾಮುಂಡಾಂಬಿಕೆಯ ಪಾದಸಾಕ್ಷಿಯಾಗಿ ನೆರವೇರಿಸುತ್ತೇವೆ; ತಾವು ಸಂದೇಹಪಡಲಾಗದು'' ಎಂದು ವಿಜ್ಞಾಪಿಸಿದರು.

ಮಿತಿಯಿಲ್ಲದಷ್ಟು ಕಷ್ಟಗಳು ಒದಗಿ ಸಕಲ ದಿಕ್ಕುಗಳಲ್ಲೂ ಅಂಧಕಾರವೇ ಮುಚ್ಚಿಕೊಂಡಿರುವಾಗ, ಆಪದ್ಬಾಂಧವರಂತೆ ಯಾರಾದರೂ ಬಂದು ಧೈರ್ಯ ಹೇಳಿ ಬೆಂಬಲಕೊಟ್ಟರೆ, ಆಗ ಆವರೆಗಿನ ದುಃಖವೆಲ್ಲ ಒಟ್ಟಿಗೆ ಸೇರಿ ಅತ್ಯಂತ ಆವೇಗವುಂಟಾಗುವುದು ಸ್ವಾಭಾವಿಕವಲ್ಲವೆ? ಈಗ ಮಹಾರಾಣಿಗೂ ಹಾಗೆಯೇ ಆಯಿತು. ಕೊನೆಗಾಣದಿದ್ದ ತಮ್ಮಾ ಕಷ್ಟಕಾಲದಲ್ಲಿ, ಅಪ್ರಾರ್ಥಿತರಾಗಿ ದೇವರಂತೆ ಬಂದೊದಗಿದ ಆ ರಾಜಪುತ್ರರನ್ನು ಕಂಡೂ, ಧೈರ್ಯ

ಹುಟ್ಟಿಸುವ ಅವರ ಮಾತುಗಳನ್ನು ಕೇಳಿಯೂ, ರಾಜಪತ್ನಿಗೆ ಅಮಿತಾನಂದ ವಾಯಿತು. ಆದರೂ ಪತಿಯ ಮರಣದ ದುಃಖವೂ, ತಮ್ಮ ದಿಕ್ಕಿಲ್ಲದ ಬಾಳೂ, ಪುತ್ರಿಯನ್ನು ದುರುಳರು ಅಪಹರಿಸಲು ಸಿದ್ಧನಾಗಿದ್ದ ದುಃಸ್ಥಿತಿಯೂ, ರಾಜ್ಯಕ್ಕೆ ಉತ್ತರಾಧಿಕಾರಿಗಳಿಲ್ಲದ ಅವ್ಯವಸ್ಥೆಯೂ, ಮತ್ತೊಮ್ಮೆ ಆಕೆಯ ಸ್ಮರಣೆಗೆ ಬಂದು ಹೃದಯವನ್ನು ಮೊನೆಯಾದ ಆಯುಧದಿಂದ ಇರಿದಂತಾಗಲು, ಮಹಾರಾಣಿಯು ಆ ದುಃಖಾವೇಗವನ್ನು ತಡೆದುಕೊಳ್ಳಲಾರದೆ, ಬಿಕ್ಕಿ ಬಿಕ್ಕಿ ಅಳತೊಡಗಿದಳು. ತೆರೆಯ ಹೊರಗೆ ಕುಳಿತಿದ್ದ ರಾಜಪುತ್ರರು ಮಹಾರಾಣಿಯು ಆ ರೀತಿ ದುಃಖಿಸುತ್ತಿರುವುದರ ಸೂಚನೆಯನ್ನು ಅರಿತು, ಬಹು ವಿಚಾರಪಟ್ಟು, "ತಾಯೇ! ರಾಜ್ಯಲಕ್ಷ್ಮಿಯಾದ ತಾವು ಹೀಗೆ ಧೈರ್ಯಗೆಡಬಾರದು. ಕ್ಷುದ್ರ ಪ್ರಾಣಿಯಾದ ಈ ನಾಯಕ ಕೀಟವನ್ನು ವಧಿಸುವುದು ಯಾವ ಮಹಾ ಕಾರ್ಯವು! ಇದಕ್ಕಾಗಿ ತಾವು ಇಷ್ಟು ಶೋಕಿಸಬೇಕೇ? ತಮ್ಮ ಕಣ್ಣಿನಿಂದ ಒಂದು ಹನಿ ನೀರು ಭೂಮಿಯ ಮೇಲೆ ಬೀಳುವಂತಾದಲ್ಲಿ ಆಯುಧಧಾರಿಗಳಾದ ನಾವು ಇಲ್ಲೇ ಪ್ರಾಣದೊಂದಿಗೆ ಎದುರಿಗಿದ್ದೂ ಸಾರ್ಥಕವೇನಾಯಿತು? ಇನ್ನು ಈ ಭೀತಿಯನ್ನೂ ವ್ಯಸನವನ್ನೂ ಬಿಟ್ಟುಬಿಡಬೇಕೆಂದು ಬೇಡುತ್ತೇವೆ. ಆ ದುಷ್ಟನಿಂದಾಗಲಿ ಅವನ ಪರಿವಾರದಿಂದಾಗಲಿ ತಮಗೂ ತಮ್ಮ ಪುತ್ರಿಗೂ ಯಾವ ಅಪಾಯವೂ ಉಂಟಾಗದಂತೆ ಕಾಪಾಡಲಿಕ್ಕಾಗಿ ನಮ್ಮ ಈ ದೇಹಗಳನ್ನು ಮುಡಿಪಾಗಿಟ್ಟಿದ್ದೇವೆ. ಇಲ್ಲಿಯ ರಾಜವಂಶದ ಸೇವೆ ಮಾಡುವ ಈ ಒಂದೇ ಕಾರ್ಯಕ್ಕಾಗಿ ದೇವಿಯ ಅಪ್ಪಣೆಯಿಂದ ನಾವು ಬಹು ದೂರ ದೇಶದಿಂದ ಇಲ್ಲಿಗೆ ಬಂದು, ತಮ್ಮ ಪಾದಸೇವೆಗೆಂದು ಸಿದ್ಧರಾಗಿರುವಾಗ ತಾವು ಇನ್ನೂ ವ್ಯಸನಪಡುವುದೇಕೆ? ನಮ್ಮ ಈ ಮಾತನ್ನು ನಂಬಿರಿ" ಎಂದು ಭರವಸೆಯ ಮಾತುಗಳನ್ನಾಡಿದರು.

ಯದುರಾಯರ ಆ ಉತ್ತೇಜಕ ನುಡಿಗಳು ರಾಜಪತ್ನಿಯ ದುಗುಡವನ್ನು ನೀಗಿಸಿದುವು; ಮನಸ್ಸು ಧೈರ್ಯಗೊಂಡಿತು. ಅವರ ಭವ್ಯವಾದ ಆಕಾರ ಲಕ್ಷಣಗಳೂ ರಾಜತೇಜಸ್ಸೂ ಆ ಕಾರ್ಯವನ್ನು ಸಾಧಿಸಲು ಇವರು ಸಮರ್ಥರು ಎಂಬ ನಂಬಿಕೆಯನ್ನುಂಟುಮಾಡಿದುವು. ಆದರೂ ಕೇವಲ ಇಬ್ಬರೇ ಆದ ಅವರು ನೂರಾರು ಮಂದಿ, ಸಾವಿರಾರು ಮಂದಿ, ಕ್ರೂರ ಕರ್ಮಿಗಳೂ ಘಾತುಕರೂ ಆದ ಆ ದುರುಳರ ಸೇನೆಯನ್ನು ಎದುರಿಸಿ ಹೇಗೆ ಜಯ ಸಂಪಾದನೆ

ಮಾಡಬಹುದು? ಎಂಬ ಒಂದು ಸಂದೇಹವು ಆ ಸ್ತ್ರೀ ಹೃದಯವನ್ನು ಶಂಕೆಗೊಳಿಸದಿರಲಿಲ್ಲ. ಆಗಲಾ ಸಾಧ್ವಿಯು, "ರಾಜಶ್ರೇಷ್ಠರೇ! ತಮ್ಮ ವಂಶವು ಶ್ರೀಕೃಷ್ಣ ಪರಮಾತ್ಮನ ಅವತಾರದಿಂದ ಪವಿತ್ರವೆನಿಸಿದುದು; ದುಷ್ಟಶಿಕ್ಷಣ, ಶಿಷ್ಟರಕ್ಷಣ, ಧರ್ಮಸಂಸ್ಥಾಪನೆಗಳಿಗೇ ಮೀಸಲಾಗಿರುವುದು ಎಂದು ನಾನು ತಿಳಿದಿದ್ದೇನೆ. ಆದರೂ ಎದುರಿಗಿರುವ ಭಯಂಕರ ಸನ್ನಿವೇಶವನ್ನು ಕಂಡು ನನ್ನ ಜಳ್ಳೆದೆಯು ಶಂಕಿಸುತ್ತದೆ. ಸಾವಿರಾರು ಮಂದಿ ಕಟ್ಟಾಳುಗಳ ಸೈನ್ಯ ಬಲದೊಡನಿರುವ ಆ ದುರುಳನನ್ನು ಕೇವಲ ಇಬ್ಬರೇ ಆದ ತಾವು ಹೇಗೆ ಎದುರಿಸಬಹುದು? ಎಂದು ಮನಸ್ಸು ಭಯಗೊಂಡು ಅಳುಕುತ್ತಿದೆ; ಅಥವಾ ತಕ್ಕಂತೆ ಸಿದ್ಧಗೊಳ್ಳಲು ಸಮಯವೂ ಇಲ್ಲ; ನಾಳೆಯೇ ಮೂರನೆಯ ದಿನ. ನಾಳೆಯೊಂದು ದಿನ ಕಳೆಯಿತೆಂದರೆ ಆ ದುರುಳನು ಮರುದಿನವೇ ತನ್ನ ಸೇನೆಯೊಂದಿಗೆ ಬಂದು ರಾಜಧಾನಿಯನ್ನೂ ಅರಮನೆಯನ್ನೂ ಸುತ್ತುಗಟ್ಟಿ ನಮ್ಮನ್ನು ಪೀಡಿಸದೆ ಬಿಡನು. ಒಂದು ಬಾರಿ ಅವನನ್ನು ಎದುರಿಸಿದರೆ ತರುವಾಯ, ಹಿಂಸಿಸಿ ಅರೆಜೀವದೊಂದಿಗೆ ಬಿಟ್ಟ ವಿಷಸರ್ಪದಂತೆ, ಅವನ ಮನಸ್ಸಿನಲ್ಲಿ ಬದ್ಧದ್ವೇಷವುಂಟಾಗಿ ಮುಂದೆ ಅವನು ಏನು ಮಾಡಲೂ ಹೇಸನು; ಕೆಣಕಿದ ಹುಲಿಯಂತೆ ಅವನ ರೋಷ ಮತ್ತು ಆವೇಶಗಳಿಗೆ ಮೇರೆಯೇ ಇರಲಾರದು; ಅಲ್ಲವೆ? ನಮ್ಮ ಬಲವು ಅಲ್ಪವಾಗಿರುವಾಗ ಬಹಿರಂಗ ಯುದ್ಧದಲ್ಲಿ ಅವನನ್ನು ಎದುರಿಸುವುದಕ್ಕಿಂತಲೂ, ಉಪಾಯದಿಂದ ಅವನನ್ನು ಸಂಧಿಸಿ ನಿಗ್ರಹಿಸುವುದು ಕ್ಷೇಮವಲ್ಲವೆ? ಅರಮನೆಯ ತೆರೆಯ ಮರೆಯೊಳಗಿರುವ ಹೆಂಗಸರು ನಾವು; ಹೊರಗಿನ ವಿಚಾರವೇನೆಂದು ನಮಗೆ ತಿಳಿಯದು; ನನಗೆ ತೋರಿದ್ದನ್ನು ಹೇಳಿದ್ದೇನೆ; ಸಾಧಕ ಬಾಧಕಗಳನ್ನು ತಾವು ದೀರ್ಘವಾಗಿ ಯೋಚಿಸಲು ಸಮರ್ಥರಾಗಿದ್ದೀರಿ" ಎಂದು ನುಡಿದಳು.

ಮಹಾರಾಣಿಯ ಸಮಯ ಸ್ಫೂರ್ತಿ, ದುರಾಲೋಚನೆ, ರಾಜನೀತಿ ನೈಪುಣ್ಯ- ಇವುಗಳನ್ನು ಕಂಡು ರಾಜಪುತ್ರರು ಪರಮಾಶ್ಚರ್ಯಪಟ್ಟರು. ಆಕೆಯ ಆ ಯೋಚನೆ ಸೂಕ್ತವಾದುದೆಂದು ಯದುರಾಯರಿಗೆ ತೋರಿತು. ಮಾರನಾಯಕನಿಗೆ ಎಷ್ಟುಮಟ್ಟಿನ ಬೆಂಬಲವಿದೆಯೆಂಬ ಕಲ್ಪನೆಯೇ ತಮಗಿಲ್ಲದಿರುವಾಗ ಸೈನ್ಯ ಸಮೇತನಾಗಿ ಬರುವ ಅವನನ್ನು ಏಕಾಏಕಿ ಎದುರಿಸುವುದು ಸಮಂಜಸವಾಗಲಾರದೆಂದು ಅವರಿಗೂ ಹೊಳೆಯದಿರಲಿಲ್ಲ. ಇಂತಹ

ಸಂದರ್ಭದಲ್ಲಿ ಅವನನ್ನು ತನ್ನ ಸೈನ್ಯದಿಂದ ಬೇರ್ಪಡಿಸಿ, ಮಿತ ಪರಿವಾರ ದೊಂದಿಗೆ ರಾಜಧಾನಿಗೆ ಬರಮಾಡಿಕೊಂಡು, ಅಲ್ಲಿ ಅಕಸ್ಮಾತ್ತಾಗಿ ಕಾಳಗ ಕೊಟ್ಟು ವಧಿಸತಕ್ಕುದೇ ಸೂಕ್ತವೆಂದು ಅವರಿಗೂ ಮನವರಿಕೆಯಾಯಿತು. ಆದರೆ ಆ ಧೂರ್ತನನ್ನು ಅವನ ಸೇನೆಯಿಂದ ಬೇರ್ಪಡಿಸುವುದಾದರೂ ಹೇಗೆ? ಅವನು ಕೋಟೆಯ ಬಾಗಿಲಲ್ಲಿಟ್ಟಿದ್ದ ಭಟರಲ್ಲಿ ಒಬ್ಬನನ್ನು ವಧೆಮಾಡಿದ ವಿಚಾರವು ಅವನಿಗೆ ತಿಳಿದು ತನ್ನಮೇಲೆ ಕೈಮಾಡಲು ಯಾರನ್ನೋ ಕರೆ ತಂದಿದ್ದಾರೆಂಬ ಭಾವನೆಯು ತೋರಿದರಂತೂ, ಅವನು ತನ್ನ ಸೈನ್ಯದ ಬೆಂಬಲ ವನ್ನು ಅರೆಕ್ಷಣವೂ ಬಿಟ್ಟಿರನು. ಇದಕ್ಕೆ ಏನಾದರೊಂದು ಉಪಾಯವನ್ನು ಮಾಡಲೇಬೇಕು ಎಂದುಕೊಂಡರು.

ಯದುರಾಯರ ಮನಸ್ಸಿನಲ್ಲಿ ಈ ಯೋಚನೆಯು ಬಂದ ಕ್ಷಣದಲ್ಲೇ ಅತ್ತ ದೇವಾಜಮ್ಮಣ್ಣಿಯ ಮನಸ್ಸಿನಲ್ಲೂ ಅದೇ ಯೋಚನೆ ತೋರಿತು. ಆಗ ಆಕೆಯು ರಾಜಪುತ್ರರನ್ನು ಕುರಿತು – "ಪ್ರಾರಂಭದಲ್ಲಿ ಅವನಿಗೆ ತನ್ನ ಸೇನೆಯ ಬೆಂಬಲವನ್ನು ತಪ್ಪಿಸಿ ಬೇರೆ ಮಾಡುವುದು ಅತಿ ಮುಖ್ಯವಾದ ವಿಚಾರ ಅದಕ್ಕೆ ನನಗೀಗ ಒಂದು ಉಪಾಯ ತೋರುತ್ತಿದೆ. ಆ ಮೇರೆಗೆ ನಾವು ನಡೆಯುವುದಾದರೆ ಈಗಲೇ ಮೋಹಾಂಧನಾಗಿರುವ ಆ ಪ್ರಾಣಿಯು, ಕಂದಕದಲ್ಲಿ ಬೀಳುವ ಸಲಗನಂತೆ, ನಮ್ಮ ಬಲೆಗೆ ಬೀಳದಿರನು. ಅದು ತಮಗೆ ಸೂಕ್ತತೋರಿದರೆ ಹಾಗೆ ಮಾಡಬಹುದಲ್ಲವೆ?" ಎಂದು ಮಹಾರಾಣಿಯು ನುಡಿದಳು. "ಆ ಸಂದರ್ಭವೇನೆಂದು ಅಪ್ಪಣೆ ಕೊಡಿಸಬೇಕು" ಎಂದು ಯದುರಾಯರು ಕೇಳಿದರು.

ಮಹಾರಾಣಿಯು ಆ ಸಂದರ್ಭದಲ್ಲಿ ರಾಜಕಾರ್ಯ ಗೌರವವನ್ನು ಯೋಚಿಸಿ, ತಮ್ಮ ಅವ್ವೆಯರ ಕಡೆ ದಿಟ್ಟಿಸಿನೋಡಲು, ಅವರೆಲ್ಲರೂ ಹೊರಕ್ಕೆ ಹೊರಟುಹೋದರು. ಆಗ ರಾಣಿಯು ತಿಮ್ಮರಸನನ್ನು ಬಳಿಗೆ ಕರೆದು ಆತನ ಕಿವಿಯಲ್ಲಿ ಪಿಸು ಮಾತಿನಿಂದ ರಾಜಪುತ್ರರಿಗೆ ಮಾತ್ರ ಕಿವಿಯಲ್ಲಿ ಹೇಳುವಂತೆ ಒಂದು ವಿಚಾರವನ್ನು ತಿಳಿಸಿದಳು. ತಿಮ್ಮರಸನು ಬಹು ಭಯ ಭಕ್ತಿಯಿಂದ ರಾಜಪತ್ನಿಯು ಹೇಳಿದ ಆ ಮಾತನ್ನು ತಂದು ಯದುರಾಯರ ಕಿವಿಯಲ್ಲಿ ಪಿಸು ಮಾತಿನಿಂದಲೇ ಹೇಳಿದನು. ಅದನ್ನು ಕೇಳಿದ ಯದುರಾಯರು ಸ್ವಲ್ಪ ಹೊತ್ತು ಆಲೋಚಿಸಿ, ಪ್ರಕೃತ ಸಂದರ್ಭದಲ್ಲಿ ಅದೇ ಸೂಕ್ತವಾದ ಉಪಾಯ

ಎಂದು ತಿಳಿದು ರಾಜಪತ್ನಿಯ ಸಮಯ ಸ್ಫೂರ್ತಿಗಾಗಿಯೂ ಸೂಕ್ಷ್ಮವಿಚಾರ ಶಕ್ತಿಗಾಗಿಯೂ ಪರಮಾಶ್ಚರ್ಯಪಟ್ಟರು.

"ಮಹಾರಾಣಿಯವರ ಯೋಚನೆ ಸೂಕ್ತವೆಂದು ತೋರುತ್ತದೆ. ಆ ವಿಚಾರದಲ್ಲಿ ಯಾವ ಮಾರ್ಗವನ್ನು ಅನುಸರಿಸುವುದು ಆವಶ್ಯಕವೋ ಅದನ್ನು ಬಹು ಶೀಘ್ರವಾಗಿಯೇ ಯೋಚಿಸಿ ನಿರ್ಧರಿಸಬೇಕಾಗಿದೆ" ಎಂದು ಯದುರಾಯರು ಪ್ರತ್ಯುತ್ತರವಿತ್ತರು.

ಒಡನೆಯೇ ಮಹಾರಾಣಿಯು ಕೋಟೆಯ ಒಳಗಡೆಯಿದ್ದ ಅರಮನೆಯ ಕಾವಲಿನವರ ಮುಖ್ಯಸ್ಥನನ್ನು ಕರೆಯಿಸಿ, ಆ ರಾಜಪುತ್ರರಿಗೆ ಪರಿಚಯ ಮಾಡಿಸಿದಳು; ಸಮಯವರಿತು ರಾಜಪುತ್ರರು ಕೊಡುವ ಆಜ್ಞೆಗಳನ್ನು ಪಾಲಿಸುತ್ತ ರಾಜಕಾರ್ಯವನ್ನು ನಂಬಿಕೆಯಿಂದ ನಿರ್ವಹಿಸಬೇಕೆಂದು ಆತನಿಗೆ ಕಟ್ಟಪ್ಪಣೆ ಮಾಡಿದಳು. ಅನಂತರ ರಾಜಪುತ್ರರನ್ನು ಕುರಿತು ರಾಜಪತ್ನಿಯು "ಸಕಲ ವಿಷಯಗಳನ್ನೂ ತಿಳಿದಿರುವ ತಮಗೆ ಇನ್ನು ಹೆಚ್ಚು ಹೇಳಬೇಕಾದುದೇನಿದೆ? ನಮ್ಮ ಅಭಿಪ್ರಾಯವನ್ನೂ ಮನೋ ನಿಶ್ಚಯವನ್ನೂ ಕರಣಿಕರು ತಮ್ಮಲ್ಲಿ ತಿಳಿಸಿದ್ದಾರಷ್ಟೆ! ಚಾಮುಂಡೇಶ್ವರೀ ಅಮ್ಮನವರ ಅನುಗ್ರಹದಿಂದ ತಾವು ದುಷ್ಟದಮನಮಾಡಿ ಜಯಶಾಲಿಗಳಾಗಿರಿ. ಭಗವತೀ ಚಾಮುಂಡಾಂಬಿಕೆಯು ತಮಗೆ ಸಕಲ ಶ್ರೇಯಸ್ಸುಗಳನ್ನೂ ದಯಪಾಲಿಸಿ ಕಾಪಾಡಲಿ; ಇಷ್ಟೇ ನಮ್ಮ ಪ್ರಾರ್ಥನೆ" ಎಂದಳು.

ಮಹಾರಾಣಿಯ ಅಪ್ಪಣೆಯಿಂದ, ಕರಣಿಕರು ತಂದು ಒಪ್ಪಿಸಿದ ವಿಜಯ ತಾಂಬೂಲವನ್ನು ಸ್ವೀಕರಿಸಿ ರಾಜಪುತ್ರರಿಬ್ಬರೂ ತಾವು ಬಂದಿದ್ದ ಗುಪ್ತ ಮಾರ್ಗದಿಂದಲೇ ಹೊರಟು ತಮ್ಮ ಬಿಡದಿಯನ್ನು ಸೇರಿದರು.

# ೬ ನೃತ್ಯ ನಾಟ್ಯ

ಬೆಳಗ್ಗೆ ನಾಲ್ಕಾಳು ಹೊತ್ತು ಏರಿದೆ. ಮಾರನಾಯಕನು ಬೆಳಗಿನ ಊಟವುಂಡು, ತಾಂಬೂಲ ಮೆಲ್ಲುತ್ತ ತನ್ನ ಮನೆಯ ಮುಂದಿನ ತೊಟ್ಟಿಯಲ್ಲಿ ಕುಳಿತಿದ್ದಾನೆ. ತೊರೆಯ ಕುಲದ ಮುಖಸ್ಥರಿಬ್ಬರು ಅವನ ಬಳಿ ಮಾತುಕಥೆಯಾಡುತ್ತ ಕುಳಿತಿದ್ದಾರೆ. ನಾಯಕನ ಮನಸ್ಸಿನಲ್ಲೆಲ್ಲ, ತಾನು ರಾಜಪುತ್ರಿಗೆ ರಮಣನಾಗಿ ಮೈಸೂರು ಅರಮನೆಯಲ್ಲಿ ಸುಖ ಸೌಭಾಗ್ಯಗಳನ್ನು ಅನುಭವಿಸುವ ವಿಚಾರವೇ ತುಂಬಿಹೋಗಿದೆ. ತಲೆಯಲ್ಲಿ ಮದುವೆಯ ವಿಚಾರವೇ ತುಂಬಿಕೊಂಡಿದ್ದುದರಿಂದ ಅವನು ಬೇರೆ ಯಾವ ಸಂಗತಿಗೂ ಗಮನಕೊಡದೆ ಇದು ಯುಕ್ತ, ಇದು ಅಯುಕ್ತ ಎಂಬುದರ ಲಕ್ಷ್ಯವೂ ಇಲ್ಲದೆ ತನ್ನ ಬಳಿಗೆ ಬಂದವರ ಮುಂದೆಲ್ಲ ತನ್ನ ಆ ಕನಸುಗಳನ್ನೇ ವಿಸ್ತರಿಸಿ ಹೇಳುತ್ತ ಸಂತೋಷಗೊಳ್ಳುತ್ತಿದ್ದಾನೆ.

"ತಿಮ್ಮಣ್ಣನಾಯಕಾ! ನಾವು ಅರಮನೆಗೆ ನಮ್ಮ ನಿಶ್ಚಯವನ್ನು ಹೇಳಿಕಳುಹಿಸಿ ಎಷ್ಟು ದಿನವಾಯಿತು?"

ತಿಮ್ಮಣ್ಣ:—ಪ್ರಭೋ! ಇವತ್ತೇ ಎರಡನೆಯ ದಿನ. ಇನ್ನು ಆ ವಾಯಿದೆಗೆ ನಾಳೆ ಒಂದು ದಿನ ಮಾತ್ರ ಉಳಿದಿದೆ.

ಮಾ. ನಾ:—ಆ ಮೂರ್ಖ ಹೆಂಗಸನ್ನು ಕೇಳುವುದೇನು? ಅವರಿಗೆ ವಾಯಿದೆಗೀಯಿದೆಯೇಕೆ? ನಮ್ಮ ಸೈನ್ಯಕ್ಕೆ ಈ ದಿನವೇ ರಾಜಧಾನಿಯ ಕಡೆಗೆ ಹೋಗಲು ಹೇಳಬಾರದೇಕೆ?

ತಿಮ್ಮಣ್ಣ:—ಪ್ರಭುಗಳು ಹಾಗೆ ಮಾಡಲು ಅಡ್ಡಿಯೇನೂ ಇಲ್ಲ. ಅವರನ್ನು ಕೇಳಿ ಮಾಡಬೇಕಾದದ್ದೇನು? ಕೋಳಿಯನ್ನು ಕೇಳಿ ಸಾಂಬಾರ ಅರೆಯಬೇಕೆ? ನಾವು ಹೋಗುವುದಕ್ಕೆ ಅವರ ಅನುಮತಿಯನ್ನೇಕೆ ಕೇಳಬೇಕು? ಪ್ರಭುಗಳ ಚಿತ್ತಕ್ಕೆ ಹೇಗೆ ಸಂತೋಷ ತೋರಿದರೆ ಹಾಗೆ ಮಾಡಬಹುದು. ಆದರೆ........

ಮಾ. ನಾ:—ಏನು? ಆದರೇನು? ಎಲ್ಲರನ್ನೂ ಕರೆಯಿಸು; ಮರಿ ವೀರನಾಯಕನಿಗೆ ತಿಳಿಸು; ಈ ದಿನ ಸಾಯಂಕಾಲದ ಹೊತ್ತಿಗೇ ಸೈನ್ಯದವರೆಲ್ಲ

ಸಿದ್ಧವಾಗಿರಲಿ. ನಾಳೆ ಬೆಳಗ್ಗೆಯೇ ಇಲ್ಲಿಂದ ಹೊರಟು ನಮ್ಮ ಸೈನ್ಯವೆಲ್ಲ ಮೈಸೂರು ಕೋಟೆಯ ಬಳಿಗೆ ಹೋಗಿ ಸೇರಲಿ.

ತಿಮ್ಮಣ್ಣ:–ಆಗಬಹುದು; ಆದರೆ ನನ್ನದೊಂದು ಅರಿಕೆಯುಂಟು—

ಮಾ. ನಾ:–ಅದೇನು?

ತಿಮ್ಮಣ್ಣ:-ಏನೆಂದರೆ, ಅರಮನೆಯಲ್ಲಿ ಗಂಡು ದಿಕ್ಕು ಯಾರೂ ಇಲ್ಲ. ಮಹಾರಾಣಿಯವರು ಅಳಿಯಂದಿರಾಗಿ ಬರುವ ತಮ್ಮನ್ನು ತಕ್ಕಂತೆ ಸತ್ಕರಿಸಲಿಕ್ಕಾದರೂ ಸಿದ್ಧಪಡಿಸಿಕೊಳ್ಳಲು, ಈ ಮೂರು ದಿನಗಳೇ ಸಾಲವು. ಹೀಗಿರುವಲ್ಲಿ ಅಷ್ಟರಲ್ಲೇ ನಾವು ಇಲ್ಲಿಂದ ಹೋಗಿ ನಿಂತುಬಿಟ್ಟರೆ, ಅವರು ಗಾಬರಿಯಾಗಿ ತೊಂದರೆಪಡಬಹುದಲ್ಲವೆ?

ಮಾ. ನಾ:–ಎಲೋ ತಿಮ್ಮಣ್ಣಾ! ನೀನು ನಾಯಕನಾಗಿ ಈ ಶೂರರ ಕುಲದಲ್ಲಿ ಹುಟ್ಟಬಹುದೇನೋ? ಮಾರಮ್ಮನಿಗೆ ಬಲಿ ಕೊಡಲಿಕ್ಕೆ ತಂದಿರುವ ಕುರಿಯ ಕುತ್ತಿಗೆಗೆ ಗಂಡುಗೊಡಲಿಯ ಏಟು ತಗುಲಿದರೆ, ಅಯ್ಯೋ ಪಾಪ! ಅದಕ್ಕೆ ನೋವಾಗುತ್ತದಲ್ಲಾ! ಎಂದು ಮರುಗುವಂತೆ ಇದೆಯಲ್ಲೋ ನಿನ್ನ ಮಾತು!

ತಿಮ್ಮಣ್ಣ:–ಇಲ್ಲ ಪ್ರಭುಗಳೇ! ನಾನು ಹಾಗೆ ಹೇಳುತ್ತಿಲ್ಲ. ನಾನು ಹೇಳುವುದೇನೆಂದರೆ, ರಾಜವಂಶಕ್ಕೆ ಅಳಿಯಂದಿರಾಗಿ ಬರುವ ತಮ್ಮನ್ನು ತಕ್ಕ ರೀತಿಯಲ್ಲಿ ಗೌರವಿಸಲಿಕ್ಕೂ ಉಪಚರಿಸಲಿಕ್ಕೂ ಸಿದ್ಧಪಡಿಸಿಕೊಳ್ಳಲು ಅವರಿಗೆ ಸ್ವಲ್ಪವಾದರೂ ಅವಕಾಶ ಬೇಕಲ್ಲವೆ ಎಂದು! ಮೂರ್ಖಳಾದ ಆ ಹೆಂಗಸಿನ ವಿಷಯದಲ್ಲಿ ಕನಿಕರವೇಕೆ? ಮಹಾರಾಜ ಪುತ್ರಿಗೆ ದಳವಾಯಿ ಮಾರ ನಾಯಕರಿಗಿಂತಲೂ ಯೋಗ್ಯ ವರ ಬೇರೆಲ್ಲಿ ದೊರೆತಾನು!

ಮಾ. ನಾ:–(ಮನಸ್ಸಿನಲ್ಲೇ ಹಿಗ್ಗುತ್ತ) ಅಲ್ಲಯ್ಯಾ ತಿಮ್ಮಣ್ಣಾ! ಹನುಮನಾಯಕಾ! ಮಹಾರಾಣಿಯು ನಮ್ಮ ಈ ಮಾತಿಗೆ ಹೆದರಿ ನಮಗೆ ರಾಜಪುತ್ರಿಯನ್ನು ಒಪ್ಪಿಸಬಿಡಬಹುದೆ? ನಿಮಗೆ ಹೇಗೆ ತೋರುತ್ತೆ?

ಹ. ನಾ:–ಪ್ರಭೋ! ಹಾಗೆ ಒಪ್ಪಿಸದಿದ್ದರೆ ಆಕೆಗೆ ಬೇರೆ ದಿಕ್ಕೇನಿದೆ? ಅವರ ಆಪ್ತಬಂಧುಗಳಲ್ಲಂತೂ ಅಳಿಯನನ್ನಾಗಿ ಆರಿಸಿಕೊಳ್ಳಲು, ನಮಗೆ ತಿಳಿದಂತೆ ಯಾರೂ ಇಲ್ಲ. ಬೇರೆ ಕಡೆ ರಾಜಪುತ್ರರನ್ನು ನೋಡಿ ನಿಶ್ಚಯ ಮಾಡಿಕೊಂಡು ಬರಬಹುದೆಂದರೆ ಅದಕ್ಕೆ ತಕ್ಕಂಥ ದಕ್ಷರಾದ ಗಂಡು ದಿಕ್ಕಿಲ್ಲ.

ಮಹಾರಾಣಿಯು ಅಂತಃಪುರದಿಂದ ಹೊರಕ್ಕೆ ಬಂದು ಬೇರೆಯವರಿಗೆ ಮುಖ ತೋರಿಸಿ ಮಾತನಾಡುವಂತಿಲ್ಲ. ಅರಮನೆಯ ಮುಖ್ಯ ಮುಖ್ಯ ನೌಕರರೆಲ್ಲರೂ ತಮ್ಮ ಭಯದಿಂದ ತಮ್ಮ ಈ ಇಚ್ಛೆಗೆ ವಿರೋಧವಾಗಿ ನಡೆಯುವಂತಿಲ್ಲ. ಇನ್ನು ಮಹಾರಾಣಿಯು ತಾವು ಹೇಳಿದಂತೆ ಕೇಳಿ ನಮೋ ಎಂದು ರಾಜಪುತ್ರಿಯನ್ನು ತಮಗೆ ಒಪ್ಪಿಸದಿದ್ದರೆ ಬೇರೆ ಮಾರ್ಗವೇನಿದೆ?

ತಿಮ್ಮಣ್ಣ:—ಒಂದು ವೇಳೆ ಆಕೆ ಹಾಗೆ ಒಪ್ಪಿಸದೆ ಮೂರ್ಖತನ ಮಾಡಿದರೆ ನಾವೇ ಅರಮನೆಗೆ ನುಗ್ಗಿ ರಾಜಪುತ್ರಿಯನ್ನು ಅಪಹರಿಸಿ ಬಿಡುತ್ತೇವೆಂಬ ಕಡೆಯ ಮಾತನ್ನೂ ಹೇಳಿ ಕಳುಹಿಸಿಯೇ ಇದ್ದೀರಲ್ಲ! ಇನ್ನು ಆ ಯೋಚನೆಯೇಕೆ?

ಮಾ. ನಾ:—ಅಷ್ಟಲ್ಲದೆ ಏನು? ನೀವು ಹೇಳಿದ್ದು ಸರಿ. ನಾವು ಅಪೇಕ್ಷಿಸಿರುವಂತೆ, ಮರ್ಯಾದೆಯಿಂದ ಕರೆದು ಮಗಳನ್ನು ಒಪ್ಪಿಸಿ ನಮ್ಮನ್ನು ಅರಮನೆಗೆ ಅಳಿಯನನ್ನಾಗಿ ಮಾಡಿಕೊಂಡರೆ ಅವರಿಗೆ ಕ್ಷೇಮ; ಹಾಗಲ್ಲದೆ ಅವರೇನಾದರೂ ತುಂಟತನಮಾಡಿದರೆ ನಾವು ಅರಮನೆಗೆ ನುಗ್ಗಿ ರಾಜಪುತ್ರಿಯನ್ನು ಹೊತ್ತುಕೊಂಡು ಬಂದು ಇಲ್ಲೇ ನಮ್ಮ ಮಾರಮ್ಮನ ಗುಡಿಯ ಮುಂದಿನ ಚಪ್ಪರದಲ್ಲಿ........

ಇಷ್ಟು ಮಾತುಕಥೆ ನಡೆಯುತ್ತಿರುವಲ್ಲಿ ಅರಮನೆಯ ಓಲೇಕಾರನೊಬ್ಬನು ಕಾಣಿಸಿಕೊಂಡು ಕೈಮುಗಿದು ಭಯಭಕ್ತಿಯಿಂದ ಒಂದು ಪತ್ರವನ್ನು ದಳಪತಿ ಮಾರನಾಯಕನಿಗೆ ಒಪ್ಪಿಸಿ, ತಲೆಬಾಗಿ ವಂದಿಸಿದನು.

ಮಾರನಾಯಕನು ಅದನ್ನು ಕೈಯಿಂದೆತ್ತಿಕೊಂಡು ಏನೆಂದು ನೋಡಲು ಬಿಚ್ಚಿದನು. ಆದರೆ ಅಕ್ಷರಶತ್ರುವಾದ ಅವನಿಗೆ ಅದರಲ್ಲೇನು ಬರೆದಿದೆಯೆಂದು ತಿಳಿಯುವ ಬಗೆ ಹೇಗೆ? "ಎಲಾ! ಏನು ಸಮಾಚಾರವೋ ಇದು?" ಎಂದು ಆ ಓಲೇಕಾರನನ್ನೇ ಕೇಳಿದನು. ಅದಕ್ಕೆ ಅವನು "ಬುದ್ಧೀ! ನನಗೇನೂ ತಿಳೀದು. ಅರಮನೆಯ ಕರಣಿಕರು ಇದನ್ನು ದಳವಾಯಿ ಮಾರನಾಯಕರಿಗೆ ತಲುಪಿಸಿ ಬಾರೆಂದರು; ನಾನು ತಂದಿದ್ದೇನೆ ಬುದ್ಧೀ" ಎಂದನು. "ಸರಿ, ಹೊರಗಿರು; ಉತ್ತರ ಹೇಳುತ್ತೇನೆ" ಎಂದು ಅವನನ್ನು ಹೊರಕ್ಕೆ ಕಳುಹಿಸಿ ನಾಯಕನು ಆ ಕಾಗದದಲ್ಲಿ ಏನು ಬರೆದಿದೆಯೋ ಓದಿಸಬೇಕೆಂದು ಮಠದ ಅಯ್ಯನವರಿಗೆ ಹೇಳಿ ಕಳುಹಿಸಿದನು.

ಕೂಲಿಯ ಮಠದ ಉಪಾಧ್ಯಾಯ ವೆಂಕಯ್ಯನವರು ನಾಯಕನ ಅಪ್ಪಣೆಯನ್ನು ಕೇಳಿದೊಡನೆಯೇ ಹೊರಟುಬಂದರು. ನಾಯಕನು ಅವರನ್ನು ಉಪಚರಿಸಿ ಮಣೆಯ ಮೇಲೆ ಕುಳ್ಳಿರಿಸಿ, "ಸ್ವಾಮಿ! ಅರಮನೆಯ ಓಲೇಕಾರ ಇದೇನೋ ಕಾಗದ ತಂದುಕೊಟ್ಟಿದ್ದಾನೆ; ಇದೇನೋ ಓದಿ ಹೇಳಿ" ಎಂದು ಅದನ್ನು ಆತನ ಕೈಗೆ ಕೊಟ್ಟನು.

ವೆಂಕಯ್ಯನವರು ಕಾಗದವನ್ನು ಬಿಚ್ಚಿದರು; ಅದರಲ್ಲಿ,
"ದಳಪತಿ ಮಾರನಾಯಕರ ಸಮಕ್ಷಂಗಳಿಗೆ—

ಮಹಾರಾಜಪುತ್ರಿ ಚಿಕ್ಕದೇವರಸಿಯವರನ್ನು ನಿಮಗೆ ಒಪ್ಪಿಸಿ ಕೊಡಬೇಕೆಂದು ನೀವು ಹೇಳಿ ಕಳುಹಿಸಿದ್ದ ಸಂಗತಿ ತಿಳಿಯಿತು. ಮಹಾರಾಣಿಯವರು ನಿನ್ನೆ ರಾತ್ರಿಯೆಲ್ಲ ಆ ವಿಚಾರವಾಗಿಯೇ ಯೋಚಿಸುತ್ತಿದ್ದರು. ಕೊನೆಗೆ, ಶೂರರೂ ರಾಜಮನೆತನಕ್ಕೆ ಬಹು ದಿನಗಳಿಂದ ಪರಿಚಿತರೂ ಆಪ್ತರೂ ಆದ ನಿಮಗಿಂತಲೂ ಯೋಗ್ಯರಾದ ಪುರುಷರು ಬೇರೆ ಯಾರೂ ದೊರೆಯರೆಂದು ತಿಳಿದು ತಮ್ಮ ಮಗಳನ್ನು ನಿಮಗೇ ಒಪ್ಪಿಸಬೇಕೆಂದು ನಿಶ್ಚಯ ಮಾಡಿದ್ದಾರೆ. ನೀವು ನಿಮ್ಮ ಆಪ್ತೇಷ್ಟರ ಮಿತ ಪರಿವಾರದೊಂದಿಗೆ ನಾಳೆ ಸಾಯಂಕಾಲಕ್ಕೆ ಮೈಸೂರು ಕೋಟೆಯ ಬಾಗಿಲ ಬಳಿಗೆ ದಯಮಾಡಿಸಿರಿ. ನಿಮ್ಮನ್ನು ತಕ್ಕಂತೆ ಎದುರುಗೊಳ್ಳಲು ಏರ್ಪಡಿಸಲಾಗುವುದು" ಹೀಗೆಂದು ವೆಂಕಯ್ಯನವರು ಆ ಕಾಗದವನ್ನು ಓದಿದರು.

ಮಾರನಾಯಕನ ಆನಂದಕ್ಕೆ ಮೇರೆ ಮೀರಿತು. ಪಕ್ಕದಲ್ಲೇ ಕುಳಿತಿದ್ದ ತಿಮ್ಮಣ್ಣನಾಯಕ ಹನುಮನಾಯಕರ ಕಡೆ ನೋಡುತ್ತ, ಮೀಸೆಗಳ ಮೇಲೆ ಕೈಯಾಡಿಸುತ್ತ, "ನಾಯಕರೇ! ನೋಡಿದಿರೋ! ಮಾರನಾಯಕನ ಏಟು ಹೇಗಿದೆ? ಆ ಹೆಣ್ಣುಹೆಂಗಸು, ಅಷ್ಟು ಮಾತು ಹೇಳಿ ಕಳುಹಿಸಿದ್ದಕ್ಕೇ ತತ್ತರಿಸಿ ಹೋಗಿದ್ದಾಳೆ. ಅಯ್ಯೋ ಪಾಪ! ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ ಎಂಬಂತೆ ಆಕೆಯ ಮೇಲೆ ಸೈನ್ಯವೇಕೆ? ದಂಡು ದಾಳಿಯೇಕೆ? ಮನೆಯವರು, ಕುಲಸ್ಥರು, ನಾವೇ ಹತ್ತುಮಂದಿ ಹೋಗಿ ಹುಡುಗಿಯ ಲಗ್ನಮಾಡಿಕೊಂಡು ಬಂದರಾಯಿತು" ಎಂದುಕೊಂಡನು. ಹೊರಗೇ ನಿಂತಿದ್ದ ಓಲೇಕಾರನನ್ನು ಕರೆಯಿಸಿ, "ಎಲೋ! ನಿಮ್ಮ ರಾಣಿಯವರಿಗೆ, ಮಾರನಾಯಕರು ಹಾಗೇ ಆಗಲಿ ಅಂದರು ಅಂತ ಹೇಳಿಬಿಡು" ಎಂದು ಹೇಳಿ ಕಳುಹಿಸಿದನು. ಹಾಗೆಯೇ

ಏನೋ ಯೋಚಿಸಿಕೊಂಡು, "ತನ್ನಲ್ಲಿದ್ದ ಹೆಚ್ಚು ಜನರ ದಂಡನ್ನು ಊರಲ್ಲೇ ಇಟ್ಟುಕೊಂಡು ಸುಮ್ಮನೆ ಏಕೆ ತಿಂಡಿ ಹಾಕಬೇಕು? ದೇಶದ ಮೇಲೆ ಹೋಗಿ ಕೊಳ್ಳೆ ಹೊಡೆದುಕೊಂಡು ಬರಲಿ" ಎಂದುಕೊಂಡು, ನಾಯಕನು ತನ್ನ ಕೈಕೆಳಗಿನ ಅಧಿಕಾರಿ ಮರಿವೀರನಾಯಕನನ್ನು ಬರಹೇಳಿ "ನಮಗೆ ಇಲ್ಲಿ ಸದ್ಯಕ್ಕೆ ಯುದ್ಧಕಾರ್ಯವೇನೂ ಇಲ್ಲ; ನಾವೂ ಮದುವೆಯ ಕೆಲಸ ಮುಗಿಸಿ ಕೊಂಡು ಮೂರನೆಯ ದಿನವೇ ಹೊರಟು ಬಂದು ನಿಮ್ಮೊಂದಿಗೆ ಸೇರುತ್ತೇವೆ. ನೀನು ಸೈನ್ಯವನ್ನು ತೆಗೆದುಕೊಂಡು, ನಂದೀದುರ್ಗ ಸೀಮೆಯ ಕಡೆ ಸಂಚಾರ ಮಾಡುತ್ತ ಇರು" ಎಂದು ಅಪ್ಪಣೆಮಾಡಿ ಕಳುಹಿಸಿದನು.

ಮಾರನಾಯಕನು, ಅರಮನೆಯ ಓಲೇಕಾರನಿಗೂ ದಂಡಿನ ಅಧಿ ಕಾರಿಗೂ ಅಪ್ಪಣೆಮಾಡುತ್ತಿದ್ದ ಸಂಗತಿಯನ್ನೆಲ್ಲ ಅಲ್ಲೇ ಕುಳಿತು ಕೇಳುತ್ತಿದ್ದ ವೆಂಕಯ್ಯನವರು, ತಾವು ಓದಿದ ಕಾಗದವನ್ನು ತಿರುಗಿಸಿ ತಿರುಗಿಸಿ ನೋಡುತ್ತ, ಏನೋ ಸಂದೇಹದಿಂದ ನಾಯಕನ ಮುಖ ನೋಡಿದರು. ನಾಯಕನು, "ಅಯ್ಯನವರಿಗೆ ತೊಂದರೆಯಾಯಿತು, ನಾಳೆ ಮಧ್ಯಾಹ್ನ ನಾವು ಇಲ್ಲಿಂದ ಮೈಸೂರಿಗೆ ಹೊರಡಬೇಕಾಗಿದೆ; ಮುಹೂರ್ತ ನೋಡಿ ಹೇಳಿ, ಗುರುಗಳೇ!" ಎಂದನು. ವೆಂಕಯ್ಯನವರು "ನಾಯಕರ ಬಳಿ ಒಂದು ಸಂಗತಿ ತಿಳಿಸ ಬೇಕಾಗಿದೆ; ಪರಾಂಬರಿಸಬೇಕು ಮಹಾರಾಣಿಯವರ ಕಡೆಯಿಂದ ಬಂದ ಈ ಪತ್ರಕ್ಕೆ ಅರಮನೆಯ ಮುದ್ರೆಯಿಲ್ಲ; ರಾಣಿಯವರ ಅಪ್ಪಣೆಯಿಂದ ಬರೆದಂತೆ ಕರಣಿಕರ ಕೈಬರಹವೂ ಇಲ್ಲ ಇದನ್ನು ತಂದುಕೊಟ್ಟವರು ಯಾರು?" ಎಂದರು.

"ಅರಮನೆಯ ಓಲೇಕಾರ"

"ಎಲ್ಲಿ ಅವನು? ಅವನನ್ನು ಕರೆಯಿಸಿರಿ" ಎಂದರು. ಅಷ್ಟರಲ್ಲಿ ಅವನು ಹೊರಟುಹೋಗಿ ಬಿಟ್ಟಿದ್ದನು; ಹುಡುಕಿಸಿದರೂ ಸಿಕ್ಕಲಿಲ್ಲ.

ಮಾರನಾಯಕ:— ಆಯಿತು, ಈಗ ಅದಕ್ಕೇನು? ಕೈಬರಹವೂ ಅರಮನೆಯ ಮುದ್ರೆಯೂ ಇದ್ದೇ ತೀರಬೇಕೆಂಬುದೇನು? ಇಷ್ಟೇ ಸಾಕು: ನಮಗೇನು ಮದುವೆಯ ವಿಚಾರ ತಿಳಿದರಾಯಿತು; ಅಲ್ಲವೇ ತಿಮ್ಮಣ್ಣ ನಾಯಕರೇ! ಎಂದು ಅವರಿಬ್ಬರ ಕಡೆಯೂ ನೋಡಿದನು. ಇಬ್ಬರೂ ಒಂದೇ ಕೊರಳಿನಿಂದ, "ಅಷ್ಟಲ್ಲದೆ ಏನು ಪ್ರಭುಗಳೇ? ನಮಗೇನು! ಮದುವೆಯ

ವಿಚಾರ ತಿಳಿದರಾಯಿತು;" ಎಂದು ನಾಯಕನ ಮಾತನ್ನೇ ಮತ್ತೊಮ್ಮೆ ಒತ್ತಿ ಹೇಳಿದರು.

ಮುಂದೆ ಸ್ವಲ್ಪ ಹೊತ್ತಿನೊಳಗಾಗಿಯೇ ನಾಯಕನ ಮುಖ್ಯ ಸೈನ್ಯವು ಮರಿವೀರನಾಯಕನ ಮೇಲ್ವಿಚಾರಣೆಯಿಂದ ಸಾಲುಸಾಲಾಗಿ ಹೊರಟು ನಡೆಯಿತು. ನಾಯಕನು ಅದನ್ನು ನೋಡಿಕೊಂಡು ತಿಮ್ಮಣ್ಣನಾಯಕನನ್ನೂ ಹನುಮನಾಯಕನನ್ನೂ ಕಳುಹಿಸಿ, ಮನೆಯೊಳಕ್ಕೆ ನಡೆದು, ಮಧ್ಯಾಹ್ನದ ಊಟ ಉಂಡು, ಸ್ವಲ್ಪಹೊತ್ತು ಮಲಗಿದ್ದನು.

ಎರಡಾಳು ಹೊತ್ತುವಾಲಿದೆ; ಮೈಸೂರು ಕಡೆಯ ದಾರಿಯಿಂದ ಎಂಟು ಹತ್ತು ಜನಗಳ ಗುಂಪೊಂದು ಬರುತ್ತಲಿದೆ. ಅವರಲ್ಲಿ ಕೆಲವರು ಓಡುತ್ತೋಡುತ್ತ ಬರುತ್ತಿದ್ದಾರೆ. ಹತ್ತಿರ ಹತ್ತಿರ ಬಂದಂತೆ ಅವರಲ್ಲಿ ಮಧ್ಯದಲ್ಲಿ ಇದ್ದವನ ಮೈಯೆಲ್ಲ ರಕ್ತದಿಂದ ತೋಯ್ದು ಕರೆಕಟ್ಟಿ ಹೋಗಿದ್ದುದು ಸ್ಪಷ್ಟವಾಗಿ ಕಾಣುತ್ತಿದೆ. ಅವನು ತನ್ನ ಬಲಗೈಯನ್ನು ಬಟ್ಟೆಯಿಂದ ಸುತ್ತಿ, ಅದನ್ನು ಎಡಗೈಯಿಂದ ಹಿಡಿದುಕೊಂಡು, ಆಗಾಗ್ಗೆ "ಅಯ್ಯೋ! ಉಪ್ಪಾ! ಉಸ್!" ಎಂದು ನರಳುತ್ತ ಬರುತ್ತಿದ್ದಾನೆ. ಮುಖ ಕಳೆಗುಂದಿ ಹೋಗಿದೆ; ಬಹು ಆಯಾಸಪಟ್ಟು ಬಳಲಿರುವಂತೆ ಕಂಡುಬರುತ್ತಿದೆ.

ಅವರೆಲ್ಲರೂ ಬಂದು, ಒಂದೇ ಉಸಿರಿಗೆ "ನಾಯಕರೆಲ್ಲಿ? ದಳವಾಯಿಗಳೆಲ್ಲಿ? ಅಯ್ಯೋ! ಮಾರನಾಯಕರೆಲ್ಲಿ?" ಎಂದು ಕೂಗಿಕೊಂಡರು. ಉಂಡು ಸುಖವಾಗಿ ಮಲಗಿದ್ದ ನಾಯಕನು, ಆ ಗಲಭೆಯಿಂದ ಎಚ್ಚೆತ್ತು, "ಏನಾಯಿತು? ಏನಾಯಿತು? ಯಾರವರು?" ಎಂದು ಕೂಗಿಕೊಂಡು ಹೊರಕ್ಕೆ ಬಂದನು. ಒಡನೆಯೇ ಅವರೆಲ್ಲರೂ ಒಂದೇ ಕೊರಳಿನಿಂದ, "ಪ್ರಭೋ! ಕಾಪಾಡಬೇಕು. ರಂಗನಾಯಕನು ಸತ್ತು ಮೈಸೂರು ಕೋಟೆಯ ಬಾಗಿಲಲ್ಲಿ ಹೆಣ ಬಿದ್ದಿದೆಯಂತೆ! ಇಗೋ ಈ ಬೀರನಿಗೆ ಬಲತೋಳು ಕತ್ತರಿಸಿಹೋಗಿದೆ" ಎಂದು ಕೂಗಿಕೊಂಡರು. ಬೀರನು ನಾಯಕನ ಪಾದದ ಬಳಿ ಬಿದ್ದು ಮೂರ್ಛೆಹೋದನು.

ಮಾರನಾಯಕನು ಕೂಡಲೇ ನೀರು ತರಿಸಿ ಅವನ ಬಾಯಲ್ಲಿ ಬಿಡಿಸಿ, ಮಿಕ್ಕವರನ್ನು ಕುರಿತು "ಎಲಾ! ಏನಾಯಿತೋ ಇವನಿಗೆ? ಇವನ ಕೈ ಕತ್ತರಿಸಿದವರು ಯಾರೋ? ರಂಗನಾಯಕನನ್ನು ಯಾರೋ ಕೊಂದವರು?

ಏನು ಸಮಾಚಾರವೊ ಇದು?" ಎಂದು ಆತುರದಿಂದಲೂ ಗಾಬರಿಯಿಂದಲೂ ಕೇಳಿದನು.

"ಬುದ್ಧೀ! ನಾವು ಇವೇ ಈಗ, ಹೊತ್ತು ತಲೇಮೇಲೆ ಬರೋ ಹೊತ್ತಿಗೆ ಕಾರುಗಹಳ್ಳಿಯಿಂದ ಹೊರಟು ಮೈಸೂರಿಗೆಂದು ಹರದಾರಿ ದೂರ ಹೋಗಿದ್ದೆವು. ಈ ಬೀರನು ಅಲ್ಲೇ ಒಂದು ಮರದ ಕೆಳಗೆ ಮೈಯೆಲ್ಲ ರಕ್ತವಾಗಿ ಎಚ್ಚರವಿಲ್ಲದೆ ಬಿದ್ದಿದ್ದನು. ಇವನನ್ನು ನಾವು ಹೆಣವೆಂದೇ ತಿಳಿದುಕೊಂಡೆವು. ಹತ್ತಿರಹೋಗಿ ನೋಡಲು ಉಸಿರಾಡುತ್ತಿತ್ತು. ತಲೆಗೆ ನೀರುತಟ್ಟಿ, ಬಾಯಿಗೆ ನೀರು ಬಿಟ್ಟು, ಗಾಳಿ ಬೀಸಿ ಎಚ್ಚರಗೊಳಿಸಿದೆವು. ಎಚ್ಚರಗೊಂಡವನೇ, 'ನಾಯಕರೆಲ್ಲಿ? ಮಾರನಾಯಕರೆಲ್ಲಿ? ಅಯ್ಯೋ ಕೈಯೇ!' ಎಂದು ಕೂಗಿಕೊಂಡನು. 'ಏನೋ? ಏನಾಯಿತೋ? ಕೈ ಏನಾಗಿದೆಯೋ?' ಎಂದು ನಾವು ಎಷ್ಟೋ ಕೇಳಿದೆವು. 'ಅಯ್ಯೋ ಕೈ ಕತ್ತರಿಸಿ ಹೋಯಿತಪ್ಪಾ! ಮೈಸೂರು ಕೋಟೆ ಬಾಗಿಲ ಹತ್ತಿರ ರಂಗನಾಯಕನ ಹೆಣಬಿದ್ದಿದೆ. ಎಲ್ಲಿ? ಮಾರನಾಯಕರೆಲ್ಲಿ!' ಎಂದು ಈ ಕಡೆ ಬಂದ ಬುದ್ಧಿ, ಏನು ಸಂಗತಿಯೋ ಅವನಿಗೇ ಗೊತ್ತು" ಎಂದು ಹೇಳಿದರು.

ಮಾರನಾಯಕನು ಸಂಗತಿ ಏನೆಂದು ತಿಳಿಯದೆ, ಗಾಬರಿಯಿಂದಲೂ ಆಶ್ಚರ್ಯದಿಂದಲೂ ಬೇಗನೆ ಅವನ ತಲೆಗೆ ನೀರು ತಟ್ಟಿಸಿ, ಗಾಳಿ ಬೀಸಿ, ಬಾಯಿಗೆ ನೀರು ಬಿಡಿಸಿದನು. ಸ್ವಲ್ಪ ಹೊತ್ತಿನೊಳಗೆ ಅವನಿಗೆ ಎಚ್ಚರವಾಯಿತು.

"ಎಲಾ! ನಿನ್ನ ಕೈ ಕತ್ತರಿಸಿದವರು ಯಾರೋ? ಯಾರೋ ರಂಗನಾಯಕನನ್ನು ಕೊಂದವರು?" ಎಂದು ನಾಯಕನು ಕೇಳಲು, ಬೀರನು "ಬುದ್ದೀ! ನನ್ನೊಡೆಯಾ! ನಾವು ಮೈಸೂರು ಕೋಟೆ ಬಾಗಿಲಲ್ಲಿ ಕಾವಲು ಇದ್ದವರು. ಬೆಳಿಗ್ಗೆ ಹೊತ್ತು ಹುಟ್ಟಿ ಎರಡಾಳು ಬಂದಿದ್ದಾಗ ದೊಡ್ಡಕೆರೆ ಕಡೆಯಿಂದ ಯಾರೋ ನಾಲ್ಕು ಜನ ಬಂದರು ಬುದ್ದೀ. ಅವರಲ್ಲಿ ಇಬ್ಬರು ನಮ್ಮ ಕಡೆ ಐನೋರು. ಇನ್ನಿಬ್ಬರು ಎತ್ತರವಾಗಿ ಲಕ್ಷಣವಾಗಿ, ನಮ್ಮ ರಾಜರಿದ್ದರಲ್ಲಾ, ಹಂಗೇ ಇದ್ದರು ಬುದ್ದೀ. ಇನ್ನೂ ಹರೇದವರು! ಅವರ ಕೈಯಲ್ಲಿ ಕತ್ತಿಗಳು, ಭಲ್ಲೆಗಳು, ಬಿಲ್ಲು ಬಾಣಗಳು ಎಲ್ಲ ಇದ್ದವು. ಅವರನ್ನು ನೋಡಿದರೆ ಯಾವುದೋ ದೇಶದ ರಾಜರು ಅಂತ ಕಂಡುಬರುತ್ತಿತ್ತು.

ಅಪ್ಪಣೆ ಇಲ್ಲದೆ ನೆಟ್ಟಗೆ ಕೋಟೇ ಬಾಗಿಲೊಳಕ್ಕೆ ಬರುತ್ತಾ ಇದ್ದ ಅವರನ್ನು ನೋಡಿ, 'ಬುದ್ಧಿಯವರ ಅಪ್ಪಣೆ; ಕೋಟೆಯೊಳಗೆ ಯಾರೂ ಬರಕೂಡದು' ಎಂದು ತಡೆದ ರಂಗನಾಯಕ. 'ಯಾವ ಬುದ್ಧಿಯವರೋ ನಮಗೆ ಅಪ್ಪಣೆ ಮಾಡುವವರು?' ಅಂದುಕೊಂಡು, ಅವರು ಒಳಗೆ ನುಗ್ಗಿ ಬಂದೇ ಬಿಟ್ಟರು. ರಂಗನಾಯಕನು ಕೈ ಅಡ್ಡವಿಟ್ಟು, ಅವರನ್ನು ತಡೆದು ತಳ್ಳಿದ ಬುದ್ಧೀ. ಅಷ್ಟಕ್ಕೇ ಸಿಟ್ಟಾಗಿ ಆ ಇಬ್ಬರು ಹೊಸಬರಲ್ಲಿ ಒಬ್ಬನು ಕತ್ತಿಯನ್ನು ಬೀಸಿ, ಒಂದೇ ಏಟಿಗೆ ರಂಗನಾಯಕನ ತಲೆಯನ್ನು ಹಾರಿಸಿಬಿಟ್ಟ. ಅದನ್ನು ಕಂಡು ನಾನು ಮುಂದಕ್ಕೆ ಹೋಗಿ, 'ಯಾವ ಊರೋರಯ್ಯಾ ನೀವು? ಕೋಟೆ ಯೊಳಗೆ ಬರಬಾರದೆಂತ ನಮ್ಮ ಧಣಿಯವರ ಅಪ್ಪಣೆ ತಿಳೀದೋ? ಇದೇನು ಕೆಲಸಮಾಡಿದಿರಿ?' ಎಂದು ಕೇಳಿದೆ. ಆಗ ಆತನು, 'ಯಾರೋ ನಿಮ್ಮ ಧಣಿ?' ಎಂದು ಆ ಕತ್ತಿಯಿಂದಲೇ ಮೇಲಕ್ಕೆ ಎತ್ತಿದ್ದ ನನ್ನ ಬಲಗೈಗೆ ಒಂದೇಟು ಕೊಟ್ಟಬುದ್ಧೀ; ತೋಳು ಅರ್ಧ ಕತ್ತರಿಸಿಹೋಯಿತು. ಅಯ್ಯೋ ನೋವು" ಎಂದು ನರಳತೊಡಗಿದನು.

"ಎಲಾ! ಆ ಮೇಲೆ ಆ ನಾಲ್ಕು ಜನರೂ ಎಲ್ಲಿಗೆ ಹೋದರೋ?" ಎಂದು ನಾಯಕನು ಕೇಳಿದನು.

"ಬುದ್ಧೀ! ಕೈನೋವಿನಿಂದ ನಾನು ನೋಡಲಿಲ್ಲ. ಎಲ್ಲರೂ ಕೋಟೆ ಯೊಳಗೆ ನಡೆದು ಅರಮನೆಯ ಕಡೆಗೆ ಹೋದಂತಿತ್ತು" ಎಂದು ಉತ್ತರ ಕೊಟ್ಟು, ಬೀರನು ನಾಯಕನ ಅಪ್ಪಣೆಪಡೆದು ತನ್ನ ಮನೆಯ ಕಡೆಹೋದನು.

ಮಹಾರಾಣಿಗೆ ಸಹಾಯವಾಗಿ ರಾಜಧಾನಿಗೆ ಯಾರೋ ಬಂದಿರಬಹು ದೆಂದು ನಾಯಕನಿಗೆ ಸಂದೇಹವಾಯಿತು. ಅವರು ಅಂಜಿಕೊಂಡು ಕಳ್ಳತನ ದಿಂದ ಅರಮನೆಗೆ ಹೋಗದೆ ತಾನು ಇರಿಸಿದ್ದ ಕಾವಲಿನವರನ್ನು ಧೈರ್ಯ ದಿಂದ ಕೊಂದದ್ದನ್ನು ನೋಡಿದರೆ, ಅವರು ಯುದ್ಧವೀರರೇ ಇರಬೇಕೆಂದೂ ತನ್ನನ್ನು ಎದುರಿಸುವ ಧೈರ್ಯವಿರುವುದರಿಂದಲೇ ಪಹರೆಯವರನ್ನು ಕೊಲ್ಲಲೂ ಅವರಿಗೆ ಧೈರ್ಯ ಬಂದಿತೆಂದೂ ಅವನು ಊಹಿಸಿದನು. ತಮ್ಮ ತಮ್ಮ ಮನೆಗಳಿಗೆ ಹೋಗಿದ್ದ ತಿಮ್ಮಣ್ಣನಾಯಕ ಹನುಮನಾಯಕರನ್ನು ಪುನಃ ಕರೆಯಕಳುಹಿಸಿದನು. ಸ್ವಲ್ಪಹೊತ್ತಿನಲ್ಲೇ ಬಂದ ಅವರನ್ನು ಕುರಿತು:—

"ನೋಡಿದಿರಾ ! ನಾವು ಕೊಟ್ಟಿದ್ದ ಮೂರು ದಿನಗಳ ಗಡುವು, ಅವರು ನಮ್ಮನ್ನು ತಕ್ಕಂತೆ ಉಪಚರಿಸುವುದಕ್ಕೆ ಸಿದ್ಧಮಾಡಿಕೊಳ್ಳಲು ಸಾಲವು ಪಾಪ; ಎಂದಿದ್ದಿರಲ್ಲಾ! ಈಗ ನೋಡಿ ! ಶತ್ರುಗಳನ್ನು ಬರಮಾಡಿಕೊಂಡು ಅರಮನೆಯಲ್ಲಿಟ್ಟುಕೊಂಡು ನಮ್ಮ ಸಂಗಡ ಯುದ್ಧಹೂಡಲು ಸಿದ್ಧಳಾಗುತ್ತಿದ್ದಾಳೆ ಆ ಮಹಾರಾಣಿ. ನೋಡಿದಿರೋ ! ಅಯ್ಯೋ ಪಾಪ ! ಹೆಂಗಸು, ಯಾರೂ ದಿಕ್ಕಿಲ್ಲ ಎಂದು ನಾವು ಸಾವಕಾಶಮಾಡಿದ್ದಕ್ಕೆ ಆದ ಪರಿಣಾಮವನ್ನು ?" ಎಂದು ನುಡಿದು ಮಾರನಾಯಕನು ಘುಡಿ ಘುಡಿಸುತ್ತ ಕಟ ಕಟನೆಂದು ಹಲ್ಲು ಕಡಿಯುತ್ತ "ಎಲ ಎಲಾ ! ಅವಳಿಗೆ ಇಷ್ಟು ಧೈರ್ಯ ಬಂತೇ? ಮಾರನಾಯಕನೆಂದರೆ ಯಾರೆಂದು ತಿಳಿದಿದ್ದಾಳೋ ಅವಳು? ಅಬ್ಬಬ್ಬಾ! ಅರಮನೆಯನ್ನು ನೆಲಸಮ ಮಾಡಿಸಿ ಅಲ್ಲಿ ಹರಳು ಬಿತ್ತಿಸುವ ಧೀರ ಮಾರನಾಯಕ ಎಂದು ಅವಳಿಗಿನ್ನೂ ತಿಳಿಯದೇನೋ ! ತಮ್ಮ ತಲೆಗಳನ್ನು ಹಾರಿಸಿ ಮಾನ ಪ್ರಾಣಗಳನ್ನು ಸೂರೆಗೊಳ್ಳುವ ಶೂರ ಮಾರನಾಯಕ ಎಂಬ ಅರಿವು ಅವಳ ತಲೆಗಿನ್ನೂ ಬಂದಿಲ್ಲವೇನೋ ! ಸರಿ ಸರಿ, ಇನ್ನೇಕೆ ಸಾವಕಾಶ ! ಮೈಸೂರಿನ ಮೇಲೆ ನಮ್ಮ ದಂಡೆಲ್ಲ ಈ ದಿನವೇ ಹೊರಡಲಿ; ಎಲ್ಲರನ್ನೂ ಬರಹೇಳು. ಇನ್ನೊಂದು ತಾಸಿನೊಳಗೆ ಮಾರಮ್ಮನ ಗುಡಿ ಬಳಿಗೆ ಕೊಂಬು ಕಹಳೆಯವರು, ಹಲಗೆ ತಮಟೆಯವರು ಎಲ್ಲಾ ಬರಲಿ" ಎಂದು ಅಬ್ಬರಿಸಿದನು.

ಅಷ್ಟು ಹೊತ್ತೂ ಸುಮ್ಮನೆ ಕೇಳಿಕೊಂಡಿದ್ದ ತಿಮ್ಮಣ್ಣನು "ನಾಯಕರೇ, ಸ್ವಲ್ಪ ಸಮಾಧಾನದಿಂದ ವಿಚಾರಮಾಡಬೇಕು. ರಂಗನಾಯಕನನ್ನು ಕೊಂದವರು ಯಾರೋ, ಎಲ್ಲಿಯವರೋ, ಅವರ ಪೂರ್ವೋತ್ತರವೇನೋ ನಮಗಂತೂ ತಿಳಿದಿಲ್ಲ. ಅದೂ ಹಾಗಿರಲಿ; ಈ ದಿನ ಬೆಳಗ್ಗೆಯೇ ಅರಮನೆಯ ಓಲೇಕಾರನು ಬಂದು ನಾಳೆಯ ದಿನ ಆಪ್ತೇಷ್ಟರೊಂದಿಗೆ ಮದುವೆಗೆ ಬರಬೇಕೆಂದು ತಿಳಿಸಿದ್ದಾನೆ. ಅವರು ಶತ್ರುಪಕ್ಷವನ್ನೇ ಸಾಧಿಸುವಂತಿದ್ದರೆ ನಿಮ್ಮ ಅವಧಿ ಕಳೆಯುವವರೆಗೂ ಸುಮ್ಮನಿದ್ದು ನೀವಾಗಿ ಮೇಲೇರಿ ಹೋದಾಗ ನಿಮ್ಮನ್ನು ಎದುರಿಸಬಹುದಾಗಿತ್ತಲ್ಲಾ! ಒಂದು ವೇಳೆ ಮಹಾರಾಣಿಯವರಿಗೆ ಬೇರೆಯವರ ಬೆಂಬಲ ಒದಗಿದೆಯೆಂದೂ ಊಹಿಸೋಣ. ಹಾಗಿದ್ದಲ್ಲಿ ನೀವು ನಿಮ್ಮ ದಂಡಿನ ಪೂರ್ಣ ಸಹಾಯದೊಡನೆ ಹೋಗಬೇಕಲ್ಲದೆ ಏಕಾಏಕಿ ಹೋಗಿ ಮೇಲೆ ಬೀಳುವುದು ಅಪಾಯಕರವಲ್ಲವೆ? ಓಲೇಕಾರನು ಬೆಳಗ್ಗೆ ಬಂದು

ತಿಳಿಸಿದ ಒಡನೆಯೇ ಹಿಂದೆ ಮುಂದೆ ನೋಡದೆ, ಮರಿವೀರನಾಯಕನಿಗೆ ಸೈನ್ಯದೊಡನೆ ಹೊರಟು ಹೋಗಲು ಅಪ್ಪಣೆ ಮಾಡಿಬಿಟ್ಟರಿ. ಸೈನ್ಯದ ಒಪ್ಪೊತ್ತಿನ ಖರ್ಚಾದರೂ ಏಕೆ ಕೈಯಿಂದ ಬೀಳಬೇಕೆಂದು ಅವನು ಆಗಲೇ ಸೈನ್ಯವನ್ನು ಹೊರಡಿಸಿಕೊಂಡು ನಡೆದೇ ಬಿಟ್ಟನು. ಯಾವ ಊರ ಕಡೆ ಹೋದನೆಂಬುದೂ ಗೊತ್ತಿಲ್ಲ. ನಂದೀದುರ್ಗದ ಕಡೆಗೆ ಆಳುಗಳನ್ನು ಕಳುಹಿಸಿ, ಸೈನ್ಯವು ದಾರಿಯಲ್ಲೇ ಎಲ್ಲಿ ಬಿಡಾರಮಾಡಿದೆಯೋ ಹುಡುಕಿಸಿ, ಊರಿಗೆ ಹಿಂದಿರುಗಿ ಕರಸುವುದು ಅಗತ್ಯವೇ ಯೋಚಿಸಿರಿ; ದುಡುಕಬೇಡಿ ರಾಜಪುತ್ರಿಯನ್ನು ಒಪ್ಪಿಸುವ ತಮ್ಮ ಅಭಿಪ್ರಾಯವನ್ನು ಬೆಳಗ್ಗೆಯೇ ತಿಳಿಸಿ ಇಷ್ಟು ಬೇಗನೇ ಬೇರೆ ಯೋಚನೆ ಮಾಡಿರಲಾರರು! ನೀವು ಎಷ್ಟೋ ದಿನಗಳಿಂದ ಅರಮನೆಯ ಸೇವೆಯಲ್ಲಿದ್ದೀರಿ. ಮಹಾರಾಣಿಯವರ ಮನಸ್ಸು ನಿಮಗೆ ತಿಳಿದಿರಬಹುದು. ಇಂತಹ ಹೊತ್ತಿನಲ್ಲಿ ದುಡುಕದೆ ಹಿಂದೆ ಮುಂದೆ ನೋಡಿಕೊಂಡು ಕೆಲಸಮಾಡುವುದು ಕ್ಷೇಮಕರ. ನಾಳೆ ಸಾಯಂಕಾಲದ ವರೆಗೆ ನೋಡೋಣ. ಅವರು, ಆಪ್ತೇಷ್ಟರೊಂದಿಗೆ ಎಂದು ಬರೆದಿದ್ದರೂ ತಕ್ಕಷ್ಟು ಬೆಂಬಲವನ್ನಿಟ್ಟುಕೊಂಡೇ ಹೋಗಿರೋಣ. ಅಲ್ಲಿ ಸಂದರ್ಭ ಬಂದಂತೆ ನೋಡಿಕೊಂಡು ಕೆಲಸಮಾಡಿದರಾಯಿತು, ಅಲ್ಲವೇ?" ಎಂದು ಸಮಾಧಾನ ಮಾಡಲು ಯತ್ನಿಸಿದನು.

ತಿಮ್ಮಣ್ಣನಾಯಕನ ಈ ಸಮಾಧಾನದ ಮಾತು ಮಾರನಾಯಕನಿಗೆ ರುಚಿಸಲಿಲ್ಲ. – "ತಿಮ್ಮಣ್ಣಾ! ನೀನು ಯಾವಾಗಲೂ ಹೀಗೆಯೇ! ಏನಾದರೂ ಕೆಲಸಮಾಡೋಣವೆಂದರೆ, ಧರ್ಮರಾಯನ ಹಾಗೆ ಏನಾದರೊಂದು ಪುರಾಣ ಹೇಳಲು ಪ್ರಾರಂಭ ಮಾಡುತ್ತೀಯೆ; ಅವರು ಏನೋ ಮೋಸದ ಯೋಚನೆ ಮಾಡುತ್ತಿರುವಂತಿದೆ. ನನಗೇನೋ ನಾಳಿನವರೆಗೆ ಕಾಯುವುದು ಹೇಡಿತನ ವೆನ್ನಿಸುತ್ತದೆ. ಗತಿಗಾಣದ ಅವರೊಂದಿಗೆ ಮಾಡುವ ಹೋರಾಟಕ್ಕೆ ದಂಡಿನ ಸಹಾಯವೊಂದು ಬೇಕೆ? ಅದು ಯಾವ ವೀರ ಬಂದಿದ್ದಾನೋ ನಾನೊಬ್ಬನೇ ನೋಡಿಕೊಳ್ಳುತ್ತೇನೆ; ಈ ದಿನವೇ ಹೊರಡೋಣ" ಎಂದು ಗರ್ಜಿಸಿದನು.

ಆಗ ಹನುಮನಾಯಕನು ಇದೇನೋ ಕೇಡುಗಾಲ ಬಂತೆಂದುಕೊಂಡು, "ಮಾರನಾಯಕರೇ! ನೀವು ದಳಪತಿಗಳು, ಶೂರರು; ನಿಮ್ಮ ಕತ್ತಿಗೆ ಯಾರೂ ಎದುರಾಗಲಾರರು. ಆದರೆ ಎಲ್ಲಾ ಕಾಲದಲ್ಲೂ ಕತ್ತಿಯ ಬಲವೇ

ಕೆಲಸ ಮಾಡಲಾರದು. ಈಗ ತಿಮ್ಮಣ್ಣನಾಯಕರು ಹೇಳಿದ ಮಾತಿನಲ್ಲಿ ತಪ್ಪೇನೂ ಕಂಡುಬರುವುದಿಲ್ಲ. ಮಹಾರಾಜರು ತೀರಿಕೊಂಡ ಲಾಗಾಯಿತು ನೀವಂತೂ ಅರಮನೆಯ ಕಡೆಗೇ ಹೋಗಿಲ್ಲವಷ್ಟೆ! ಮಹಾರಾಣಿಯವರಿಗೆ ನೀವು ಅರಮನೆಯ ಆಡಳಿತಕ್ಕೆ ಸೇರಿದ ಒಬ್ಬ ಅಧಿಕಾರಿ ಎಂಬ ಅಭಿಮಾನ ವಿತ್ತೋ ದ್ವೇಷವಿತ್ತೋ ಉದಾಸೀನ ಭಾವವಿತ್ತೋ ನಿಮಗೇ ತಿಳಿಯದು. ಈಚೆಗೆ ನೀವು ಸೈನ್ಯವನ್ನು ನಿಮ್ಮ ಪರವಾಗಿ ಮಾಡಿಕೊಂಡು ರಾಜಪುತ್ರಿ ಯನ್ನೂ ರಾಜ್ಯವನ್ನೂ ಸ್ವಾಧೀನಪಡಿಸಿಕೊಳ್ಳುವ ಯೋಚನೆಮಾಡಿದ ತರುವಾಯ ಮಹಾರಾಣಿಯವರೇನು ಹೆದರಿ ನಿಮಗೆ ಮಗಳನ್ನುಒಪ್ಪಿಸಿ ಜೀವ ದೊಂದಿಗೆ ಉಳಿದರೆ ಸಾಕೆಂದು ಯೋಚಿಸಿದ್ದಾರೋ, ಅಥವಾ ನಿಮ್ಮ ಮೇಲೆ ವೈರತ್ವವನ್ನು ಸಾಧಿಸಿ ರಾಜವಂಶದ ಮರ್ಯಾದೆಯನ್ನು ಕಾಪಾಡಿಕೊಳ್ಳ ಬೇಕೆಂದು ಯೋಚಿಸಿದ್ದಾರೋ ಯಾವುದೂ ನಿಮಗೆ ಗೊತ್ತಿಲ್ಲ. ಹಾಗೊಂದು ವೇಳೆ ಅವರಿಗೆ ಬೇರೆಯವರ ಪ್ರಬಲ ಸಹಾಯ ದೊರೆತು, ನಿಮ್ಮ ಮೇಲೆ ಹಗೆತನ ಸಾಧಿಸುವ ಯೋಚನೆ ಮಾಡಿದ್ದಲ್ಲಿ, ನೀವೂ ದಂಡಿನ ಬೆಂಬಲ ದೊಂದಿಗೆ ತಕ್ಕಷ್ಟು ಜಾಗ್ರತೆಯಿಂದ ಇರುವುದೇ ಮೇಲು. ಓಲೇಕಾರನ ಮಾತು ಕೇಳಿದೊಡನೆಯೇ ನೀವು ದಂಡನ್ನು ಹೊರಡಿಸಿ ಕಳುಹಿಸಿಬಿಟ್ಟುದು ಅಷ್ಟು ಯುಕ್ತವಾಗಲಿಲ್ಲವೆಂದು ನನಗೂ ತೋರುತ್ತದೆ. ಈಗಲೂ ಸಾಧ್ಯವಿರು ವಷ್ಟು ಶೀಘ್ರವಾಗಿ ಸೇನೆಯನ್ನುಹಿಂದಕ್ಕೆ ಕರೆಯಿಸಿಕೊಂಡು ಈ ಮದುವೆಯ ಕೆಲಸಗಳೆಲ್ಲ ಮುಗಿಯುವವರೆಗೆ ಪೂರ್ತಿ ದಂಡೂ ನಿಮ್ಮ ಬಳಿಯೇ ಇರುವಂತೆ ಅಪ್ಪಣೆಮಾಡಿರಿ. ಮರಿವೀರನಾಯಕನಿಗೆ, ಎಲ್ಲಿದ್ದರೂ ತಕ್ಷಣ ಹಿಂದಿರುಗು ವಂತೆ ಹೇಳಿ ಕಳುಹಿಸಿರಿ. ಎಷ್ಟಾಗಲೀ ತಿಮ್ಮಣ್ಣನಾಯಕರು ಹಿರಿಯರು, ಬಹು ವಿಷಯಗಳನ್ನುತಿಳಿದವರು; ದುಡುಕದೆ ಅವರು ಹೇಳುವಂತೆ ನಿಧಾನಿಸಿ ಕೆಲಸಮಾಡುವುದು ಮೇಲು" ಎಂದನು.

ಅವರಿಬ್ಬರ ಅಭಿಪ್ರಾಯವೂ ಒಂದೇ ರೀತಿಯಿದ್ದು ತನ್ನ ಯೋಚನೆಗೆ ವಿರುದ್ಧವಾಗಿರುವುದನ್ನು ತಿಳಿದು ಮಾರನಾಯಕನು, ಸ್ವಲ್ಪ ಹೊತ್ತು ಏನೂ ತೋರದೆ, ತಲೆಯನ್ನು ತಗ್ಗಿಸಿ ಯೋಚಿಸುತ್ತ ಕುಳಿತನು. ರಾಜ್ಯವನ್ನೂ ಹೆಣ್ಣನ್ನೂ ಸಾಧಿಸುವ ಕೆಲಸವು ಬರಿಗೈಯಿಂದ ಸಾಗದು; ಬೆಂಬಲಕ್ಕೆ ಸೇನೆ ಇರುವುದು ಉತ್ತಮ ಎಂದು ಅವನಿಗೂ ತೋರಿತು. ಇಬ್ಬರು ಭಟರನ್ನು

ಕರೆದು "ಮರಿವೀರನಾಯಕನು ದಂಡಿನೊಡನೆ ಹೊರಟು ನಂದೀದುರ್ಗದ ಕಡೆಗೆ ಯಾವ ದಾರಿಯಿಂದ ಹೋಗಿದ್ದರೂ ನೀವು ಬೇರೆ ಬೇರೆ ಕಡೆಯಿಂದ ಹೋಗಿ ಅವನನ್ನು ಕಂಡು, ಕೂಡಲೇ ಹೊರಟು ಬರಬೇಕೆಂದು ನಾನು ಹೇಳಿದೆ ನೆಂದು ತಿಳಿಸಿ ಕರೆದುಕೊಂಡು ಬನ್ನಿರಿ" ಎಂದು ಕಳುಹಿಸಿದನು. ನಾಳೆ ಮಧ್ಯಾಹ್ನ ಮೈಸೂರಿಗೆ ಹೊರಡಲು ಕಾರುಗಹಳ್ಳಿಯ ಎಲ್ಲಾ ಗಂಡಾಳುಗಳೂ ಸಿದ್ಧರಾಗಿರಬೇಕೆಂದೂ ಅಪ್ಪಣೆಮಾಡಿದನು.

ಅಷ್ಟು ಹೊತ್ತಿಗೆ ಸಾಯಂಕಾಲವಾಗಲು ಎಲ್ಲರೂ ತಮ್ಮ ತಮ್ಮ ಮನೆ ಗಳಿಗೆ ಹೊರಟು ಹೋದರು. ಆ ದಿನ ರಾತ್ರಿಯನ್ನೆಲ್ಲ ನಾಯಕನು ವಿಶೇಷ ಕಳವಳದಿಂದ ಕಳೆದನು. ಎಷ್ಟು ಬಗೆಯಿಂದ ಪ್ರಯತ್ನಿಸಿದರೂ ಮನಸ್ಸು ಒಂದು ಸ್ತಿಮಿತಕ್ಕೆ ನಿಲ್ಲದೆ ಸಮಾಧಾನಗೊಳ್ಳದೆ, ಏನೋ ಭೀತಿ, ಏನೋ ಕಳವಳ ತೋರುತ್ತ ಚಂಚಲಗೊಳ್ಳುತ್ತಿತ್ತು. ತನ್ನಲ್ಲಿ ತಾನೇ "ಆ ಇಬ್ಬರು ಹೊಸಬರು ಯಾರಿರಬಹುದು? ಏನೇನೋ ಭಯಂಕರ ಆಯುಧಗಳನ್ನು ಧರಿಸಿದ್ದರೆಂದು ಹೇಳುತ್ತಾರಲ್ಲ! ಬೇರೆ ದೇಶದ ಯಾರಾದರೂ ರಾಜರಿರ ಬಹುದೇ? ಛೆ! ಛೆ! ರಾಜರೆಲ್ಲಿಂದ ಬರಬೇಕು! ರಾಜಾಧಿರಾಜರು ಸಹಾಯಕ್ಕೆ ಬರಬೇಕೆಂದರೆ, ಆನೆ ಕುದುರೆ ದಂಡು ಧಾಳಿಗಳಿಲ್ಲದೆ ಪರದೇಶಿ ಗಳಾಗಿ ಇಬ್ಬರೇ ಬರುವುದುಂಟೆ? ಒಂದು ವೇಳೆ ಸುತ್ತುಮುತ್ತಿನ ರಾಜ ಬಂಧುಗಳಲ್ಲಿ ಯಾರಾದರೂ ಇರಬಹುದೆ? ನನಗೆ ತಿಳಿದಂತೆ ಅಂತಹ ಶೂರ ರಾದ ಬಂಧುಗಳು ಯಾರೂ ಇವರಿಗೆ ಇರಲಿಲ್ಲವಲ್ಲಾ! ಇದೇನೋ ವಿಚಿತ್ರ ವಾಗಿದೆ" ಎಂದುಕೊಂಡು ಸ್ವಲ್ಪ ಹೊತ್ತು ಸುಮ್ಮನಿದ್ದನು.

ಮನಸ್ಸು ಚಂಚಲವಾಗಿ ಪುನಃ ಚಿಂತಿಸತೊಡಗಿತು; "ಊರು ಎಂದ ಮೇಲೆ ಪರದೇಶದವರು ದಾರಿಹೋಕರಾಗಿ ಯಾರೋ ಬಂದಿರಬಹುದು. ನಮ್ಮ ಕಾವಲಿನವರು ಒರಟುತನದಿಂದ ಮೈಮೇಲೆ ಬಿದ್ದು ತಳ್ಳಿರಬೇಕು. ಅದರಿಂದ ಕೋಪಗೊಂಡ ಅವರು ರಂಗನಾಯಕನ ತಲೆಯನ್ನು ಹಾರಿಸಿರ ಬಹುದು. ಹೋಗಲಿ, ಇದೇನು ಸಾಮಾನ್ಯ ಸಂಗತಿ. ನಾಳೆಯ ಹೊತ್ತಿಗೆ ಮರಿವೀರನು ದಂಡಿನೊಂದಿಗೆ ಹಿಂದಿರುಗಿ ಬರಬಹುದೇ? ಯಾವ ಕಡೆಗೆ ಹೋಗಿದ್ದಾನೋ? ನಮ್ಮ ಆಳುಗಳಿಗೆ ಅವನನ್ನು ಕಾಣಲು ಸಾಧ್ಯವಾಗು ತ್ತದೋ ಇಲ್ಲವೋ? ದಂಡಿನ ಬೆಂಬಲವಿಲ್ಲದೆ ನಾಳೆ ರಾಜಧಾನಿಯ ಮೇಲೆ

ಏರಿಹೋಗುವುದು ಕ್ಷೇಮುಕರವೇ?'' ಹೀಗೆ ಮನಸ್ಸು ಬಹು ಬಗೆಯಿಂದ ಯೋಚಿಸತೊಡಗಿತು.

ಹಾಗೂ ಸ್ವಲ್ಪ ಹೊತ್ತು ಕಳೆಯಿತು. ನಾಯಕನು ನಿದ್ರೆಬಾರದೆ ಹಾಸಿಗೆಯ ಮೇಲೆ ಹೊರಳಾಡುತ್ತ, "ಮಹಾರಾಣಿಯು ಹಾಗೇನಾದರೂ ಒಂದು ವೇಳೆ ದ್ರೋಹವನ್ನೆಣಿಸಿ ನನ್ನ ಮೇಲೆ ದ್ವೇಷ ಸಾಧಿಸಲು ಯೋಚಿಸಿರಬಹುದೆ? ಹಾಗಿದ್ದರೆ, ಈ ದಿನ ಬೆಳಗ್ಗೆಯೇ, 'ಮಗಳನ್ನು ಒಪ್ಪಿಸಿಕೊಡಲು ಸಿದ್ಧಳಿದ್ದೇನೆ; ಆಪ್ತೇಷ್ಟರೊಡನೆ ಬರಬೇಕು' ಎಂದು ಹೇಳಿ ಕಳುಹಿಸಿದ್ದೇಕೆ? ತಿಮ್ಮಣ್ಣನಾಯಕನು ಹೇಳಿದಂತೆ, ಅವರಿಗೆ ಈಗ ನನಗಿಂತಲೂ ಯೋಗ್ಯ ವರನನ್ನು ಹುಡುಕಿ ಲಗ್ನಮಾಡಿಕೊಡಲು ಅನುಕೂಲವಿಲ್ಲ. ನಿಜ; ಹಾಗೆಂದು ರಾಜಮನೆತನದ ಅವರು ತೊರೆಯನಾದ ನನಗೆ ಮಗಳನ್ನು ಕೊಡಲು ಒಪ್ಪುವುದು ಸಾಧ್ಯವೆ? ವೆಂಕಯ್ಯನವರು, ಆ ಪತ್ರಕ್ಕೆ ಅರಮನೆಯ ಮುದ್ರೆಯಾಗಲಿ ಕರಣಿಕರ ಕೈಬರಹವಾಗಲಿ ಇರಲಿಲ್ಲ ಎಂದು ಹೇಳಿದರಲ್ಲ; ಇದರಲ್ಲೇನಾದರೂ ಮೋಸವಿರಬಹುದೆ?'' ಹೀಗೆಯೇ ಬಹಳ ಹೊತ್ತು ಏನೇನೋ ವಿಚಾರಗಳು ಬಂದು, ಮನಸ್ಸು ಹೊಯ್ದಾಡಿ ತೊಳಲಿಹೋಯಿತು. ಆಗ ಸ್ವಲ್ಪ ಹೊತ್ತು ನಿದ್ರೆ ಬಂದಂತಾಗಿ, ಪುನಃ ತಟ್ಟನೆ ಎಚ್ಚರವಾಯಿತು. "ಛೆ, ಛೆ! ನಾನು ಇಲ್ಲದ ಸಲ್ಲದ ವಿಚಾರಗಳನ್ನೆಲ್ಲ ತಲೆಗೆ ತಂದುಕೊಂಡು ಏಕೆ ಸಂದೇಹಗೊಳ್ಳಬೇಕು? ಗಂಡನನ್ನು ಕಳೆದುಕೊಂಡು ಪರದೇಶಿಯಾಗಿ ನಿಂತಿರುವ ಹೆಂಗಸು, ಪಾಪ! ಎಲ್ಲಿಂದ ಯಾವ ರಾಜರನ್ನು ಸಹಾಯಕ್ಕೆ ಕರೆಯಿಸಿಕೊಂಡಾಳು? ಇದೆಲ್ಲ ನನ್ನ ಮನಸ್ಸಿನ ಭ್ರಾಂತಿ. ಮರಿವೀರನಾಯಕನು ನಾಳೆ ನಾವು ಹೊರಡುವ ಹೊತ್ತಿಗೆ ಬಂದರಂತೂ ಯೋಗ್ಯವಾಯಿತು; ಇಲ್ಲದಿದ್ದರೆ, ಕಾರುಗಹಳ್ಳಿಯಲ್ಲಿರುವ ನಮ್ಮವರೇ ನೂರಾರು ಮಂದಿಯನ್ನೂ ಹತ್ತಿರದ ನಾಲ್ಕಾರು ಹಳ್ಳಿಗಳ ಜನರನ್ನೂ ಕರೆಯಿಸಿಕೊಂಡು ಹೊರಟರಾಯಿತು. ಹಾಗೆ ಹೊಸಬರಾಗಿ ಬಂದಿರುವ ಅವರು ಶತ್ರುಗಳೇ ಆಗಿದ್ದರೆ, ಅವರನ್ನು ಆಹುತಿ ತೆಗೆದುಕೊಳ್ಳಲು ಈ ಮಾರನಾಯಕನೊಬ್ಬನೇ ಸಾಲದೆ? ಅದೇನು ಮಹತ್ಕಾರ್ಯವೆಂದು ಇಷ್ಟು ಬಗೆಯ ಯೋಚನೆಮಾಡಬೇಕು?'' ಎಂದು ಸಮಾಧಾನಮಾಡಿಕೊಂಡನು.

ಹೀಗೆ ರಾತ್ರಿಯೆಲ್ಲ ಕಳವಳ, ದಿಗಿಲು, ಮನಸ್ಸಿನ ಹೊಯ್ದಾಟ, ಸಮಾಧಾನ ಮುಂತಾದುವುಗಳಲ್ಲೇ ಕಳೆದು, ನಾಯಕನಿಗೆ ಕೊನೆಗೆ ಬೆಳಗಿನ ಜಾವದ ತಂಗಾಳಿ ಬೀಸಿದಮೇಲೆ, ಸ್ವಲ್ಪ ನಿದ್ರೆಬಂತು. ನಿದ್ರೆಯಲ್ಲೂ ಅವನು ಏನೇನೋ ಕನವರಿಸುತ್ತ, ಸ್ವಲ್ಪಹೊತ್ತಿನ ಮೇಲೆ ಕೆಟ್ಟ ಧ್ವನಿಯಿಂದ, "ಅಯ್ಯೋ! ಅಯ್ಯೋ! ಹೋಯಿತು! ನನ್ನ ಕೊರಳು" ಎಂದು ಕಿರಿಚಿಕೊಂಡನು. ಮಗ್ಗುಲ ಹಾಸಿಗೆಯಲ್ಲೇ ಮಲಗಿದ್ದ ಅವನ ಹೆಂಡತಿಯು ಗಂಡನ ಆ ವಿಕಾರ ಸ್ವರವನ್ನುಕೇಳಿ ದಿಗಿಲುಗೊಂಡು, ಕೂಡಲೇ ಮೈಮುಟ್ಟಿ ಅಲುಗಾಡಿಸಿ, "ಅಯ್ಯೋ! ಏನಾಯಿತು? ಏಕೆ ಹಾಗೆ ಕೂಗಿಕೊಂಡಿರಿ?" ಎಂದು ಎಚ್ಚರಗೊಳಿಸಿದಳು. ನಾಯಕನು, ಹಾಸಿಗೆಯಮೇಲೆ ಎದ್ದುಕುಳಿತು, ಕೊರಳನ್ನು ಮುಟ್ಟಿಮುಟ್ಟಿ ನೋಡಿಕೊಳ್ಳುತ್ತ, "ನೋಡು, ನನಗೀಗ ಒಂದು ಕೆಟ್ಟಕನಸು ಬಿದ್ದಿತ್ತು. ಅದರಲ್ಲಿ ಯಾರೋ ಒಬ್ಬನು ಒಂದು ನೂಲು ಹಗ್ಗವನ್ನು ಬೀಸಿ ದೂರದಿಂದ ನನ್ನನ್ನು ಸೆಳೆದುಕೊಂಡು, ಹತ್ತಿರಕ್ಕೆ ಹೋದ ಕೂಡಲೇ ಕತ್ತಿಯಿಂದ ನನ್ನಕೊರಳನ್ನುಕೊಯ್ದಂತೆ ಆಯಿತು". ಎಂದು ಅದೇ ಭೀತಿಯಿಂದ ಮತ್ತೆ ಮತ್ತೆ ಕೊರಳನ್ನು ಮುಟ್ಟಿ ನೋಡಿಕೊಳ್ಳುತ್ತ ಇದ್ದನು.

ಬೆಳಗಾಯಿತು. ಒರಟು ಸ್ವಭಾವದ ಮಾರನಾಯಕನು ಕನಸಿನ ವಿಚಾರವನ್ನು ಅಷ್ಟುಮಟ್ಟಿಗೆ ಮನಸ್ಸಿಗೆ ಹಚ್ಚಿಕೊಂಡು ಕೊರಗದೆ ಅದು ಮತ್ತೆ ಮತ್ತೆ ಜ್ಞಾಪಕಕ್ಕೆ ಬರುತ್ತಿದ್ದರೂ ಮರೆಯಲು ಯತ್ನಿಸುತ್ತಿದ್ದನು. ರಾತ್ರಿ ಯೋಚಿಸಿಕೊಂಡಿದ್ದಂತೆಯೇ ತನ್ನ ಕಡೆಯ ಜನರನ್ನು ಸುತ್ತುಮುತ್ತಿನ ಹಳ್ಳಿಗಳಿಗೆ ಕಳುಹಿಸಿ, ಗಂಡಾಳುಗಳೆಲ್ಲ ಬರಬೇಕೆಂದು ತಿಳಿಸಿದನು. ಮಧ್ಯಾಹ್ನದ ವೇಳೆಗೆ ಸುಮಾರು ಮುನ್ನೂರು ನಾನೂರು ಮಂದಿಯಷ್ಟು ಗುಂಪು ಬಂದು ನೆರೆಯಿತು. ಅವರೆಲ್ಲರಿಗೂ ದೊಣ್ಣೆಗಳನ್ನೂ ಮಚ್ಚುಗಳನ್ನೂ ಗಂಡುಗೊಡಲಿಗಳನ್ನೂ. ಈಟಿಗಳನ್ನೂ ಸಿದ್ಧಪಡಿಸಿಕೊಟ್ಟನು. ಜನಗಳು ಬಂದು ಸೇರುತ್ತಲೇ ಇದ್ದರು. ಮೇಲೆ ಮೇಲೆ ಬಂದು ಸೇರುತ್ತಿದ್ದ ಜನರ ಗುಂಪನ್ನು ನೋಡಿದಂತೆಲ್ಲ ಅವನ ಮನಸ್ಸಿಗೆ "ನನ್ನನ್ನುಎದುರಿಸುವ ಗಂಡಸು ಯಾವನು?" ಎಂಬ ಧೈರ್ಯವು ಹುಟ್ಟುತ್ತಿತ್ತು. ಆದರೂ, ಆಗಾಗ ಕನಸಿನ ಜ್ಞಾಪಕ ಬಂದು, ಸ್ವಲ್ಪಹೊತ್ತು ಆ ದೈತ್ಯ ಮಾರನಾಯಕನ ಎದೆಯೂ ಗಡಗಡ ನಡುಗುತ್ತಿತ್ತು; ಮನಸ್ಸು ಭೀತಿಗೊಂಡು ಏನೂ ತೋರದಂತೆ ಸ್ತಬ್ಧವಾಗುತ್ತಿತ್ತು. ಆಗ ಒಮ್ಮೆ ಅವನು

ಕೂಲಿಮಠದ ವೆಂಕಯ್ಯನವರನ್ನು ಬರಹೇಳಿ, "ಸ್ವಾಮಿ! ಈ ಮಧ್ಯಾಹ್ನ ನಾನು ಮೈಸೂರಿಗೆ ಹೊರಡಬೇಕಾಗಿದೆ; ಗ್ರಹಬಲ ಹೇಗಿದೆ? ಸ್ವಲ್ಪ ನೋಡಿ ಹೇಳಿ" ಎಂದನು.

ವೆಂಕಯ್ಯನವರು ಪಂಚಾಂಗವನ್ನು ಬಿಚ್ಚಿನೋಡಿದರೆ, ಆ ದಿನ ಮಧ್ಯಾಹ್ನದ ಮೇಲೆ ಮೃತ್ಯುಯೋಗವಿದೆ! ಅದನ್ನು ಕಂಡು ಆತಂಕಪಟ್ಟು, 'ನಾಯಕರೇ! ಪ್ರಯಾಣವನ್ನು ನಾಳೆಗೆ ಒದಗಾಯಿಸಲು ಸಾಧ್ಯವಿಲ್ಲವೆ?" ಎಂದರು. ಕಾರಣವೇನೆಂದು ಕೇಳಲು, ಅವರು ಇದ್ದ ಸಂಗತಿಯನ್ನು ತಿಳಿಸದಿರಲು ಸಾಧ್ಯವಾಗಲಿಲ್ಲ. ಅದನ್ನು ಕೇಳಿ, ನಾಯಕನು, "ಛೀ! ಏನಿದು! ನನ್ನಂಥ ಧೀರನೂ ಮುಹೂರ್ತ ಗಿಮೂರ್ತ, ಗಳಿಗೆ ನಿಮಿಷಗಳು, ಮಾನ ಮೇಷಗಳು ಎಂದು ನೋಡಿಕೊಂಡು ಕೆಲಸಮಾಡಬೇಕೆ? ನಾನು ಹೊರಟ ವೇಳೆ ಸುಮುಹೂರ್ತವಾಗಿರಲೇ ಬೇಕು. ಹೊರಡುವ ಹೊತ್ತಿನಲ್ಲಿ ಹೀಗೆಲ್ಲ ಪ್ರಶ್ನೆ ಮುಂತಾಗಿ ಕೇಳುವುದೇ ತಪ್ಪು" ಎಂದುಕೊಂಡು ಆತನನ್ನು ಕಳುಹಿಸಿಬಿಟ್ಟನು. ಎಲ್ಲರೂ ಮಾರಮ್ಮನ ಗುಡಿಯ ಮುಂದಿನ ವಿಸ್ತಾರವಾದ ಬಯಲಿನಲ್ಲಿ ಕುಳಿತಿರಬೇಕೆಂದು ಕಳುಹಿಸಿ ತಾನು ಮನೆಯನ್ನು ಹೊಕ್ಕನು.

ಸ್ನಾನಮಾಡಿ ತಿಲಕವನ್ನಿಟ್ಟುಕೊಂಡನು. ಊಟವಾಯಿತು. ದಟ್ಟಿ ಚಲ್ಲಣಗಳನ್ನು ತೊಟ್ಟು, ಮೈಗೆ ಕವಚವನ್ನು ಬಿಗಿದು, ರೇಷ್ಮೆಯ ನಡುಕಟ್ಟನ್ನು ಕಟ್ಟಿ, ತಲೆಗೆ ಜರಿಯ ಪಾಗನ್ನು ಸುತ್ತಿಕೊಂಡು ಸಿದ್ಧನಾದನು. ಸೊಂಟದಲ್ಲಿ ಬಾಕು, ಕೈಯಲ್ಲಿ ವ್ಯಾಘ್ರನಖ, ಗಂಡುಗೊಡಲಿ, ಕತ್ತಿ ಮುಂತಾದ ಆಯುಧಗಳನ್ನು ಧರಿಸಿದನು. ತಾಂಬೂಲವನ್ನು ಜಗಿಯುತ್ತ ಹೊರಡಲನುವಾದನು. ಮಹಾಧೀರನಾದ ತನ್ನ ಪತಿಯು ಎಂದೂ ಇಲ್ಲದೆ, ಆ ದಿನ ಬೆಳಗಿನ ನಿದ್ರೆಯಲ್ಲಿ ಅಪಸ್ವರದಿಂದ ಅರಚಿಕೊಂಡದ್ದನ್ನು ಕೇಳಿದ್ದ ಅವನ ಪತ್ನಿಯು, ಆ ದಿನ ಆತನ ಜೀವಕ್ಕೇನೋ ಅಪಾಯವಿದೆಯೆಂದು ತಿಳಿದು, ಕಣ್ಣಲ್ಲಿ ನೀರುದುರಿಸುತ್ತ ಮುಂದಕ್ಕೆ ಬಂದು, "ಐನೋರು ಹೇಳಿದಹಾಗೆ, ಈ ದಿನ ಬಿಟ್ಟು ನಾಳೆ ಹೊರಡಬಾರದೆ? ಮುಹೂರ್ತ ಚೆನ್ನಾಗಿಲ್ಲ ಅಂತ ಹೇಳೋವಾಗಲೇ ಏಕೆ ಹೊರಡಬೇಕು?" ಎಂದು ಅಂಗಲಾಚಿಕೊಂಡಳು.

ಹೊರಕ್ಕೆ ಹೊರಡುವಾಗ ಅಂತಹ ಅವಲಕ್ಷಣವಾದ ಮಾತನ್ನಾಡಿದಳಲ್ಲಾ ಎಂದು ನಾಯಕನಿಗೆ ಕೋಪ ಮಿತಿಮೀರಿತು. ಒಂದುಸಾರಿ ಅವಳನ್ನು

ದುರುಗುಟ್ಟಿ ನೋಡಿ, "ಛಿ! ಛಿ! ನಿನ್ನನ್ನು ಯಾರು ಕೇಳಿದರು? ನಡೆ ಒಳಗೆ" ಎಂದು ಗದರಿಸಿಕೊಂಡನು. ಕಣ್ಣೀರಿಡುತ್ತ ಅವಳು ಒಳಕ್ಕೆ ಹೋಗುತ್ತಿರಲು, ನಾಯಕನು ಹೊರಹೊರಟು, ಸೇವಕರು ತಂದು ನಿಲ್ಲಿಸಿದ್ದ ತನ್ನ ಬಿಳಿಯ ಕುದುರೆಯಮೇಲೆ ಕುಳಿತು ಠೀವಿಯಿಂದ ಸವಾರಿಮಾಡಿಕೊಂಡು, ಮಾರಮ್ಮನ ಗುಡಿಯ ಕಡೆಗೆ ಬಂದನು.

ಮಾರಮ್ಮನ ಗುಡಿಯ ಮುಂದಿನ ವಿಸ್ತಾರವಾದ ಬಯಲಿನಲ್ಲಿ ನಾನೂರು ಐನೂರು ಮಂದಿ ತೊರೆಯ ಗಂಡಾಳುಗಳು ನೆರೆದಿದ್ದಾರೆ; ಒಬ್ಬೊಬ್ಬರೂ ತಮ್ಮ ತಮ್ಮ ಕತ್ತಿ, ಮಚ್ಚು, ಗಂಡುಗೊಡಲಿಗಳನ್ನು ಮಸೆದುಕೊಳ್ಳುತ್ತ, ಮನಬಂದಂತೆ ಹರಟುತ್ತ ಕೇಕೆಹಾಕುತ್ತ ರಣೋತ್ಸಾಹವನ್ನು ಮೈದುಂಬಿಸಿ ಕೊಳ್ಳುತ್ತಿದ್ದಾರೆ. ದಳವತಿ ಮಾರನಾಯಕನು ಕುದುರೆಯನ್ನು ಕುಣಿ ಕುಣಿ ಸುತ್ತ ಸವಾರಿಮಾಡಿಕೊಂಡು ದೇವಸ್ಥಾನದ ಬಳಿಗೆ ಬಂದು, ಅಲ್ಲಿ ವಿಸ್ತಾರ ವಾಗಿ ನೆರೆದಿದ್ದ ಜನಸಮೂಹವನ್ನು ಕಂಡು ತೃಪ್ತಹೃದಯವನ್ನು ಸೂಚಿಸುವ ಹಸನ್ಮುಖದಿಂದ ಪೂಜಾರಿಯನ್ನು ಕರೆಯಿಸಿ, ದೇವತೆಗೆ ಪೂಜೆಯನ್ನು ಸಲ್ಲಿ ಸೆಂದು ಆಜ್ಞಾಪಿಸಿದನು.

ಪೂಜೆಯಾಯಿತು; ಮಂಗಳಾರತಿಯೂ ಆಯಿತು. ಕುದುರೆಯಿಂದಿಳಿದು ದೇವಿಯ ಬಳಿಯಲ್ಲೇ ನಿಂತಿದ್ದ ಮಾರನಾಯಕನು ನೆರೆದ ಜನಗಳೆದುರಿಗೆ ಹಿರಿದಾವೇಶದಿಂದ ಕೈಯೊಳಗಿನ ಕರವಾಳವನ್ನು ಬೀಸುತ್ತ, ಜನಗಳ ಮನಸ್ಸಿ ನಲ್ಲಿ ಉತ್ಸಾಹವೂ ಆವೇಶವೂ ಉಂಟಾಗುವಂತೆ ಹೀಗೆ ಹೇಳತೊಡಗಿದನು. "ನನ್ನ ಪ್ರೀತಿಯ ಸುಭಟರೇ! ನಾವು ಈ ದಿನ ಮೈಸೂರು ರಾಜಧಾನಿಯನ್ನು ಜಯಿಸಲು ಹೊರಡುತ್ತಿದ್ದೇವೆ. ನಿಮ್ಮಲ್ಲಿ ಒಬ್ಬೊಬ್ಬರೂ ಮಹಾಧೀರ ರೆಂದೂ, ಆಯುಧವನ್ನು ಹಿಡಿದು ಯುದ್ಧಕ್ಕೆ ನಿಂತರೆ ಶತ್ರುವಿಗೆ ಮಣಿಯ ತಕ್ಕವರಲ್ಲವೆಂದೂ ನನಗೆ ಗೊತ್ತಿದೆ. ಕಾರುಗಹಳ್ಳಿಯ ವೀರರು ರಾಜ್ಯವನ್ನು ಗಳಿಸಿದ ಶೂರರೆಂದು ತಲೆ ತಲಾಂತರಕ್ಕೂ ಲೋಕ ಪ್ರಸಿದ್ಧರಾಗುವರೆಂದು ನನಗೆ ನಂಬಿಕೆ ಇದೆ. ರಣರಂಗದಲ್ಲಿ ನಿಮಗೆ ಎದುರಾಗುವ ಗಂಡಸು ನಾಲ್ಕು ಎದೆಗಳಿಂದ ಬರಬೇಕೆಂದು ನಾನು ತಿಳಿದಿದ್ದೇನೆ. ಕೈಯಲ್ಲಿ ಕೈದು ಹಿಡಿದು ಯುದ್ಧಕ್ಕೆ ಹೋದಮೇಲೆ ಜಯ ಅಥವಾ ಮರಣ ಇದೇ ವೀರನ ಮುಖ್ಯ ಗುರಿ. ನಿಮಗೆ ಈ ಪಾಠವು ಹುಟ್ಟಿನಿಂದಲೇ ತಿಳಿದಿವೆ; ಆದ್ದರಿಂದ ನಾವು

ಈ ಯುದ್ಧದಲ್ಲಿ ಶತ್ರುವಿಗೆ ಬೆನ್ನು ತೋರಿಸದೆ ಮೈಸೂರು ರಾಜಧಾನಿಯನ್ನು ಜಯಿಸಿ, ಜಯಲಕ್ಷ್ಮಿಯ ಮುಂದಲೆಯನ್ನು ಹಿಡಿದೆಳೆದು ರಣಭೇರಿ ಹೊಡೆಯಿಸಿಕೊಳ್ಳುತ್ತ ಹಿಂದಿರುಗುವೆವೆಂದೇ ನಾನು ನಂಬಿದ್ದೇನೆ. ನನ್ನ ವೀರ ದಂಡಾಳುಗಳೇ, ಬೆದರಬೇಡಿ, ಕೈನಡುಗದಿರಲಿ, ಎದೆಗುಂದದಿರಲಿ, ದೇವಿಯ ಪಾದದಾಣೆ! ಈ ದಂಡಯಾತ್ರೆಯೇ ನಮ್ಮ ಅದೃಷ್ಟವನ್ನು ನಿರ್ಣಯಿಸುವ ಮುಖ್ಯ ಸಂದರ್ಭ. ಇದರಲ್ಲಿ ಜಯಿಸಿ, ಮೈಸೂರು ರಾಜಧಾನಿಯಲ್ಲಿ ರಾಜಬೀದಿಗಳ ದೊಡ್ಡದೊಡ್ಡ ಮನೆಗಳಲ್ಲಿ ವಾಸಮಾಡುತ್ತ, ನಾಗರಿಕರಾದ ದೊಡ್ಡ ಮನುಷ್ಯರಂತೆ, ನೀವುಗಳೆಲ್ಲ ಸುಖಸಂತೋಷಾನುಭವದಲ್ಲಿ ಬಾಳುವುದನ್ನು ನೋಡಬೇಕೆಂದು ನನಗೆ ಆಸೆ ಇದೆ. ಅದು ನಿಮ್ಮ ಭುಜಬಲದಿಂದ ಸಾಧ್ಯವಾಗುತ್ತದೆಂದು ನನಗೆ ನಿಶ್ಚಯವಾಗಿ ಭರವಸೆಯುಂಟಾಗಿದೆ" ಎಂದು ನುಡಿದನು.

ತರುವಾಯ, ದೇವಿಯ ಕಡೆ ತಿರುಗಿ, "ಮಹಾ ತಾಯೇ, ನಮ್ಮಾ ಸೈನ್ಯವು ಈ ದಿನ ಮೈಸೂರು ರಾಜಧಾನಿಯ ಮೇಲೆ ಸಾಗಿಹೋಗುತ್ತಿದೆ. ಅರಮನೆಯವರು ನಮಗೆ ಭರವಸೆ ಕೊಟ್ಟಿರುವಂತೆ ತಮ್ಮ ಮಾತನ್ನುಳಿಸಿಕೊಂಡು, ನಮ್ಮ ವಿಷಯದಲ್ಲಿ ಮರ್ಯಾದೆಯಿಂದ ನಡೆದುಕೊಂಡರೆ ಸರಿ; ಹಾಗಲ್ಲದೆ, ಏನಾದರೂ ದ್ರೋಹಮಾಡುವ ಸೂಚನೆ ತೋರಿದರೆ, ಕೂಡಲೇ ಮೇಲೇರಿ ಹೋಗಿ, ರಾಜಸಿಂಹಾಸನವನ್ನು ಸ್ವಾಧೀನಪಡಿಸಿಕೊಳ್ಳುವ ಯೋಚನೆಮಾಡಿದ್ದೇವೆ. ಇಷ್ಟುದಿವಸ ನಮ್ಮನ್ನು ಕಾಪಾಡಿ ಜಯವನ್ನು ಕರುಣಿಸುತ್ತ ಬಂದ ನೀನು ಈಗಲೂ ನಮ್ಮ ಕೈಹಿಡಿದು ಕಾಪಾಡು. ತಾಯೇ, ಮೈಕೂದಲು ಕೊಂಕದಂತೆ ಕಾಪಾಡುತ್ತೇನೆಂದು ಪ್ರಸಾದಕೊಡು. ಬಲಗಿವಿಯ, ಬಲಭುಜದ ಅಥವಾ ಬಲಗೈಯ ಮೇಲಿನ ಒಂದು ಹೂವನ್ನು ದಯಪಾಲಿಸು. ಅಮ್ಮಾ, ಮೈದುಂಬಿ ಭರವಸೆಯ ವಚನವನ್ನು ನುಡಿ. ನಮ್ಮ ಈ ಪ್ರಾರ್ಥನೆಯನ್ನು ನಡೆಯಿಸಿಕೊಟ್ಟೆಯಾದರೆ, ನಿನಗೆ ಕಲ್ಲಿನ ದೊಡ್ಡಗುಡಿ ಕಟ್ಟಿಸಿ, ನಂದಾದೀಪಗಳನ್ನಿಟ್ಟು ಬಲಿಗಳನ್ನೊಪ್ಪಿಸಿ ಹಬ್ಬಮಾಡುತ್ತೇವೆ. ಹತ್ತುಮಂದಿ ಹಸಿರುಡಿಗೆಗಳಿಂದ ಹರಿವಾಣಗಳಲ್ಲಿ ದೀಪಗಳನ್ನು ಹೊತ್ತು ನಿನಗೆ ಪೂಜೆ ಸಲ್ಲಿಸುತ್ತೇವೆ.—ಅಮ್ಮಾ ವರಕೊಡು! ದುರ್ಗಮ್ಮಾ, ಬಾಯಿಬಿಟ್ಟು ಒಂದು ಮಾತನಾಡು" ಎಂದು ಬಗೆ ಬಗೆಯಿಂದ ಬೇಡಿಕೊಂಡನು.

ಕೂಡಲೆ ಕಹಳೆ ಹಲಗೆ ತಮಟೆಗಳು ದಿಕ್ಕುಗಳನ್ನು ಕಿವುಡಾಗಿಸುವಂತೆ ಬಾಜಿಸಿದುವು. ಎಲ್ಲರೂ ಜಯ ದುರ್ಗಾಂಬಾ ಎಂದು ಭಜನೆಮಾಡುತ್ತ ಅಲಂಕಾರ ಮಾಡಿಟ್ಟಿದ್ದ ಅಚ್ಚ ರಕ್ತವರ್ಣದ ದೇವಿಯ ಉತ್ಸವ ವಿಗ್ರಹದ ಮೂರ್ತಿಯನ್ನೇ ರೆಪ್ಪೆಯಿಕ್ಕದೆ ಕಣ್ಣಿಟ್ಟು ನೋಡುತ್ತಿದ್ದಾರೆ. ಆಗ ದೇವತೆಯ ಎಡಗಿವಿಯ ಮೇಲಿನ ಒಂದು ಕಣಿಗಿಲಹೂವು ಕೆಳಕ್ಕೆ ಉದುರಿತು. ಅನಂತರ ಸ್ವಲ್ಪಹೊತ್ತಿನೊಳಗಾಗಿಯೇ ಎಂದಿನಂತೆ, ಆ ಗುಂಪಿನಲ್ಲಿದ್ದ ಒಬ್ಬನ ಮೇಲೆ ಆವೇಶ ಬಂದಂತಾಗಿ, ಆ ಕ್ಷುದ್ರದೇವತೆಯು, – "ಎಲವೋ ಮಾರನಾಯಕಾ, ಈ ದಂಡಯಾತ್ರೆಯನ್ನು ಈಗ ನಿಲ್ಲಿಸು, ಸಾಕುಮಾಡು. ನಿನಗೆ ಈ ಸಾರಿ ಜಯವಾಗಲಾರದು. ನೀನು ಶತ್ರುಗಳೆಂದು ತಿಳಿದು ಯುದ್ಧಕ್ಕೆ ತೊಡಗಿರುವ ರಾಜವಂಶದವರ ಮೇಲೆ ಈಗ ನನ್ನ ಆಟವೇನೂ ಸಾಗಲಾರದು. ಅವರಿಗೆ ಸಾಕ್ಷಾತ್ ಪ್ರಳಯರುದ್ರನ ರಾಣಿಯಾದ ಚಾಮುಂಡೇಶ್ವರಿಯ ಸಂಪೂರ್ಣ ಬೆಂಬಲ ಒದಗಿದೆ. ಆ ಮಹಾ ತಾಯಿಯ ಮುಂದೆ ನನ್ನ ಶಕ್ತಿಯು ಉಡುಗಿ ಹೋಗಿದೆ. ಉಪ್ಪುಂಡ ಮನೆಗೆ ಎರಡು ಬಗೆದು, ಚಿಕ್ಕಂದಿನಿಂದ ನಿನ್ನನ್ನು ಕಾಪಾಡುತ್ತ ಬಂದ ರಾಜಮನೆತನಕ್ಕೆ ದ್ರೋಹವೆಣಿಸಿ, ನೀನು ಯುದ್ಧಕ್ಕೆ ತೊಡಗಿದೆಯಾದರೆ, – ಎಲಾ ನಾನು ಹೇಳುವ ಮಾತು ಕೇಳು, ನೀನು ಈ ಕಾಳಗದಲ್ಲಿ ನಿರ್ನಾಮವಾಗುವುದು ಖಂಡಿತವೆಂದು ತಿಳಿ. ನಿಶ್ಚಯವಾಗಿ ಈಗ ಯುದ್ಧಪ್ರಯತ್ನ ಮಾಡಬೇಡ" ಎಂದು ಹೇಳಿಸಿದಳು.

ದೇವಿಯ ಆವೇಶ ಬಂದಾತನು ಹೇಳುತ್ತಿದ್ದ ಆ ಮಾತುಗಳನ್ನು ಕೇಳಿ ಕೇಳಿದಂತೆಲ್ಲ ಮಾರನಾಯಕನ ಕೋಪವು ಏರುತ್ತಹೋಯಿತು. ಕಣ್ಣುಗಳು ಕೆಂಡಗಳಂತೆ ಕೆಂಪಾಗಿ ಉರಿಯತೊಡಗಿದುವು; ಹಲ್ಲುಗಳು ಕಟಕಟನೆ ಕಡಿದುವು; ಸಿಟ್ಟಿನ ಭರದಲ್ಲಿ ತುಟಿಗಳು ಅದುರಿದುವು; ಪಾದಗಳಿಂದ ನೆಲ ವನ್ನು ಘಟ್ಟಿಸುತ್ತ ಆ ದುರುಳನು, ಅದು ದೇವತೆಯೆಂಬ ಭಾವನೆಯನ್ನು ಸಂಪೂರ್ಣವಾಗಿ ಮರೆತು, "ಎಲ ಎಲಾ, ಕೇಳಿದಿರಾ! ಈ ಮೂಳಿ ದೇವತೆಯು ಹೇಳಿದ ಮಾತನ್ನು! ಇಷ್ಟು ದಿನಗಳೂ ಈ ಗುಂಡುಕಲ್ಲಿನ ಬೋಳು ಮುಂಡೆಗೆ, ಗಡಿಗೆ ಗಡಿಗೆ ಎಣ್ಣೆ ಸುರಿದು, ಸಾಲು ಸಾಲು ಹೆಡಿಗೆಗಳ ಬೋನವಿಕ್ಕಿ, ಹಿಂಡು ಹಿಂಡು ಕುರಿಕೋಳಿಗಳನ್ನು ಬಲಿಕೊಟ್ಟು ಪೂಜಿಸಿದ್ದಕ್ಕೆ ಈ ಖೂಳ ದೇವತೆಯು ನಮಗೆ ಕೊಟ್ಟ ವರ ಕೊನೆಗೆ ಇದೇ ಅಲ್ಲವೆ?

ಏಳಿ! ಏಳಿ! ಇನ್ನು ಈ ಹಾಳು ಗುಡಿಯಲ್ಲಿ ನಮಗೇನು ಕೆಲಸವಿದೆ! ನಮ್ಮ
ಈ ತೋಳುಗಳಲ್ಲಿ ಬಲವಿರುವಾಗ, ಎದೆಯಲ್ಲಿ ಧೈರ್ಯವಿರುವಾಗ, ಕೈಯಲ್ಲಿಯ
ಈ ಮಚ್ಚುಕತ್ತಿಗಳು ಹರಿತವಾಗಿರುವಾಗ, ನಾವು ಇಂಥ ಈ ಮೂಳ
ಮೂದೇವಿಗಳನ್ನು ಕೇಳಿಕೊಳ್ಳಬೇಕಾದ್ದೇನು? ನಾವು ಕಷ್ಟಮಾಡಿ ದುಡಿದು,
ಗಳಿಸಿ, ಒಪ್ಪಿಸಿದ ಬೋನವನ್ನುಂಡು ಕೊಬ್ಬಿ, ನಾವು ನೀನೇ ಗತಿಯೆಂದು
ಬೇಡಿ ಮಾಡಿದ ಪೂಜೆಯಿಂದ ಹಿಗ್ಗಿ, ಈ ಮೂಳಿಯು ಕೊನೆಗೆ ನಮಗೆ
ಕೊಟ್ಟ ವರವನ್ನು ನೋಡಿದಿರಾ? ಕೇಳಿದಿರಾ, ಇವಳ ಈ ತಲೆತಿರುಕ ಮಾತು
ಗಳನ್ನು! ಎಲ ಎಲಾ! ಇನ್ನಿವಳಿಂದ ನಮಗೆ ಆಗಬೇಕಾದ್ದೇನಿದೆ? ಶೂರರಾದ
ಕಾರುಗಹಳ್ಳಿಯ ವೀರರೇ, ನಿಮಗೆ ಎಣೆಯಾರಿದ್ದಾರೆ? ಈ ತುಚ್ಛದೇವಿಯು
ನುಡಿದ ಮಾತಿಗಾಗಿ ಬೆದರಬೇಡಿ; ಹಿಂಜರಿಯಬೇಡಿ;'' ಹೀಗೆಂದು ಹೇಳುತ್ತ
ಹೇಳುತ್ತ ಮುಂದಕ್ಕೆ ನಡೆದು, ರೋಷವು ಮೇಲೆ ಮೇಲೆ ಉಕ್ಕುತ್ತಿರಲು,
ದೇವತೆಯನ್ನು ದುರುಗುಟ್ಟಿ ನೋಡುತ್ತ,-"ಇವಳ ಶಕ್ತಿಸಾಮರ್ಥ್ಯವೆಷ್ಟೆಂಬು
ದನ್ನು ನೀವು ಈಗಲೇ ನೋಡುವಿರಂತೆ! ನಾವು ಕೊಟ್ಟರಿಷ್ಟು ನೆರಳು,
ನೀಡಿದರಿಷ್ಟು ಅನ್ನ, ಇಟ್ಟರೊಂದು ದೀಪ ಈ ಮೂಳ ದೇವತೆಗೆ! ಹೀಗೆ
ನಮ್ಮಿಂದಲೇ ಬದುಕೆ, ಇಷ್ಟು ಬಗೆಯಿಂದ ಪೂಜೆಮಾಡಿಸಿಕೊಂಡೂ ಕೊಬ್ಬಿ,
ಕೊನೆಯಲ್ಲಿ ಇಂತಹ ಮಾತುಗಳನ್ನು ನುಡಿದಳೇ! ಇನ್ನು ಇವಳಿಲ್ಲಿ ಇರ
ಬಾರದು. ಇವಳ ಬಲವೆಷ್ಟಿದೆ ಎಂಬುದನ್ನಾದರೂ ನೋಡಿಬಿಡುತ್ತೇನೆ"
ಎಂದು ಒದರುತ್ತ ಮುಂದುವರಿದನು. ದಡ ದಡನೆಂದು ನಡೆದು ಗರ್ಭಗುಡಿಯ
ಒಳಹೊಕ್ಕನು. ಎಲ್ಲರೂ ಹಾ! ಹಾ! ಎಂದು ಭಯದಿಂದ ನಡುಗುತ್ತ
ಸೊಲ್ಲಡಗಿ ನೋಡುತ್ತಿದ್ದಾರೆ! ನಾಯಕನು ಎರಡು ಕೈಗಳನ್ನೂ ನೀಡಿ
ಕುಲದೇವತೆ ಗ್ರಾಮದೇವತೆ ಎಂದು ಊರಿನವರೆಲ್ಲರೂ ಆರಾಧಿಸುತ್ತಲಿದ್ದ
ಆ ದೇವಿಯ ಗುಂಡನ್ನೆತ್ತಿ ಪಕ್ಕದಲ್ಲೇ ಇದ್ದ ತಿಪ್ಪೆಗೆಸೆದನು. ನೆರೆದ ಜನ
ರೆಲ್ಲರೂ, "ಅಯ್ಯೋ! ಮಹಾ ಕೇಡು! ಊರಿಗೆ ಇದರಿಂದ ಮಹಾ ಪೀಡೆ
ಯುಂಟಾದೀತು! ಗ್ರಾಮದೇವತೆಯನ್ನು ಹಾಗೆ ಕೀಳಬಾರದು; ಬೇಡ!
ಅಯ್ಯೋ ಬೇಡ!" ಎಂದು ಮೊರೆಯಿಟ್ಟು ಬೇಡಿಕೊಂಡರು. ಆದರೂ
ಲಕ್ಷ್ಯವಿಲ್ಲದೆ ಆ ನೀಚನು ಕಾಲಪ್ರೇರಿತನೋ ಎಂಬಂತೆ, ಒಂದೊಂದನ್ನಾಗಿ
ಅಲ್ಲಿದ್ದ ಎಲ್ಲಾ ಕಲ್ಲುಗುಂಡುಗಳನ್ನೂ ಕಿತ್ತೆಸೆದು ದೇವಿಯ ಗುಡಿಯನ್ನು

ಬರಿದು ಮಾಡಿದನು. ಪೂಜೆಗೆಂದು ತಂದಿಟ್ಟಿದ್ದ ಸಾಮಗ್ರಿಗಳನ್ನೆಲ್ಲ ಈಡಾಡಿದನು. ಹೂವು ಪತ್ರೆ ಕುಂಕುಮ ಅರಿಸಿನ ಮುಂತಾದ ಮಂಗಳ ದ್ರವ್ಯಗಳನ್ನೆಲ್ಲ ಕಾಲಿನಿಂದೊದೆದು ನಾಶಗೊಳಿಸಿದನು!

ಅದನ್ನೆಲ್ಲ ನೋಡಿ, ಊರಿನ ಹಿರಿಯರು "ಅಯ್ಯೋ ನಮ್ಮ ಊರಿಗೇನೊ ವಿನಾಶಕಾಲ ಬಂದೊದಗಿದೆ ಗ್ರಾಮದೇವತೆಯನ್ನು ಇಷ್ಟುಮಟ್ಟಿಗೆ ಭಂಗಪಡಿಸಿ ನಾಶಗೊಳಿಸಿದಮೇಲೆ ಇನ್ನು ಈ ದುರುಳ ಚಂಡಾಲನು ಬದುಕಿ ಬಾಳಿದಂತೆಯೇ ಇದೆ. ಅಯ್ಯೋ, ಇದೇನೀ ಅನ್ಯಾಯ!" ಎಂದು ಹಾಹಾಕಾರ ಮಾಡಿದರು.

ಇಷ್ಟು ಬಗೆಯಿಂದ ದೇವತೆಯನ್ನು ಭಂಗಗೊಳಿಸಿದ ಆ ಖೂಳನು ತನ್ನವರನ್ನು ಕುರಿತು, "ಎಲವೋ, ಇಲ್ಲಿ ನಮಗಿನ್ನೇನು ಕೆಲಸ? ಹೊರಡೋಣ ಬನ್ನಿರೋ" ಎಂದು ಕೈಬೀಸಿ ಕರೆದು ಕುದುರೆಯನ್ನು ಕುಣಿಸುತ್ತ ಹೊರಟು ತನ್ನ ದಂಡನ್ನು ನಡೆಯಿಸಿಕೊಂಡು ಮೈಸೂರ ಕಡೆಗೆ ಪ್ರಯಾಣ ಮಾಡಿದನು. ಕುದುರೆಯೂ ನೃತ್ಯನಾಟ್ಯವಾಡುತ್ತ ತನ್ನ ಧಣಿಯನ್ನು ಹೊತ್ತು ಸಾಗಿತು.

---

## ೭ ವಿಜಯೋತ್ಸವ

ಮಹಾರಾಣಿ ದೇವಾಜಮ್ಮಣ್ಣಿಯವರ ಕಡೆಯಿಂದ ರಾಜಪುತ್ರರಾದ ಯದುರಾಯರೂ ಕೃಷ್ಣರಾಯರೂ ವಿಜಯ ವೀಳಯವನ್ನು ಪಡೆದು ಹೊರಟುದು ಸರಿಯಷ್ಟೆ! ಒಡನೆಯೇ ಅವರು ಲೇಶವೂ ಸಾವಕಾಶಮಾಡದೆ ಕಾರ್ಯತತ್ಪರರಾದರು. ಆ ಖೂಳ ಮಾರನಾಯಕನು ಯಾವ ಕ್ಷಣಕ್ಕೆ ದಂಡೆತ್ತಿ ಬಂದರೂ ಅವನನ್ನು ತಕ್ಕಂತೆ ಎದುರಿಸಲು ಸಿದ್ಧರಾಗಿರಬೇಕೆಂದು ಯೋಚಿಸಿ ಅದಕ್ಕಾಗಿ ಸನ್ನಾಹಗಳನ್ನು ಮಾಡತೊಡಗಿದರು; ಅರಮನೆಯ ಕಾವಲಿನ ಸೈನಿಕರ ಮುಖ್ಯಸ್ಥರನ್ನು ಕರೆಯಿಸಿ, ಅವರೊಂದಿಗೆ ನಡೆದು ಕೋಟೆಯ ಮುಖ್ಯ ಮುಖ್ಯ ಸಂದುಕಟ್ಟಿನ ಸ್ಥಳಗಳನ್ನೆಲ್ಲ ನೋಡಿಕೊಂಡು ಬಂದರು; ಮರೆಯಾಗಿದ್ದ ಸ್ಥಳಗಳಲ್ಲೆಲ್ಲ ಬಿಲ್ಲುಬಾಣಗಳಿಂದ ಸಜ್ಜಿತರಾದ ಸೇವಕರನ್ನು

ಗೋಪ್ಯವಾಗಿ ಅಡಗಿರುವಂತೆ ಅಪ್ಪಣೆಮಾಡಿದರು; ಅರಮನೆಯ ಕಡೆಯಿಂದ ತುತೂರಿಯ ಶಬ್ದವಾದ ಒಡನೆಯೇ ಹೊರಕ್ಕೆ ಬಂದು ಶತ್ರುದಳದಮೇಲೆ ಕಾಣಿಸಿಕೊಂಡು ಧ್ವಂಸಮಾಡತಕ್ಕದ್ದೆಂದು ನೇಮಿಸಿದರು; ಅರಮನೆಯ ಸಂರಕ್ಷಣೆಗಾಗಿ ಸೈನಿಕರು ಮಾರುವೇಷಗಳಿಂದ ಗುಪ್ತ ಆಯುಧಗಳನ್ನು ಧರಿಸಿ ಸಾಮಾನ್ಯ ಜನರಂತೆಯೇ ಅಲ್ಲಲ್ಲಿ ತಿರುಗಾಡುತ್ತಿರಬೇಕೆಂದೂ ಸೂಚನೆಯನ್ನು ಅನುಸರಿಸಿ ನಡೆಯತಕ್ಕದ್ದೆಂದೂ ಆಜ್ಞೆಮಾಡಿದರು; ಅರಮನೆಯ ಧನಕನಕ ಮುತ್ತುಮಾಣಿಕ್ಯ ಮುಂತಾದ ಸಕಲ ಜವಾಹಿರಿಗಳನ್ನೂ ನೆಲಮನೆಗಳಲ್ಲಿ ಗುಟ್ಟಾಗಿ ಭದ್ರಗೊಳಿಸಿದರು; ರಾಜಪತ್ನಿ ರಾಜಪುತ್ರಿಯರನ್ನು ಸುರಕ್ಷಿತ ಸ್ಥಳಗಳಲ್ಲಿರಿಸಿ ಬಲವಾದ ಸಂರಕ್ಷಕ ಭಟರನ್ನು ಕಾವಲಿಟ್ಟು ಯಾವ ಬಗೆಯಿಂದಲೂ ಅಪಾಯ ಒದಗದಂತೆ ಏರ್ಪಡಿಸಿದರು; ಅರಮನೆಯ ಮುಖ್ಯ ಮುಖ್ಯ ದ್ವಾರಗಳನ್ನು ಬೀಗ ಮುದ್ರೆಗಳಿಂದಲೂ ಸೇವಕ ಜನರ ಕಾವಲಿನಿಂದಲೂ ಸುರಕ್ಷಿತಗೊಳಿಸಿದರು; ತಾವೂ ಸಕಲ ಶಸ್ತ್ರಾಸ್ತ್ರ ಸಜ್ಜಿತರಾಗಿ, ಆಯುಧಪಾಣಿಗಳಾದ ಯೋಧರನ್ನು ಜೊತೆಗಿಟ್ಟುಕೊಂಡು, ಗುಪ್ತವಾಗಿ ಅರಮನೆಯ ಒಂದೆಡೆಯಲ್ಲಿ ಮರಸಿಕೊಂಡಿದ್ದರು.

ಹಿಂದಿನ ಅಧ್ಯಾಯದ ಕೊನೆಯ ಭಾಗದಲ್ಲಿ ಹೇಳಿದಂತೆ ದುರುಳ ಮಾರನಾಯಕನು ಮೃತ್ಯುಪ್ರೇರಿತನಾಗಿಯೋ ಎಂಬಂತೆ ಕುಲದೇವತೆಯನ್ನು ಕಿತ್ತೊಗೆದು, ತನ್ನ ಆ ದಂಡನ್ನು ನಡೆಯಿಸಿಕೊಂಡು ಮೈಸೂರಿನ ಕಡೆಗೆ ಧಾವಿಸಿದನು. ಮದಿಸಿದ ಆನೆಯಂತೆ, ಮುಂದಾಗುವುದನ್ನು ಲಕ್ಷ್ಯಕ್ಕೆ ತಾರದೆ ಆ ಧೂರ್ತನು "ಈ ಕ್ಷಣದಲ್ಲಿ ಅರಮನೆಯನ್ನು ಪ್ರವೇಶಿಸಬೇಕು; ಮಹಾರಾಣಿಯು ತನ್ನ ಮಾತಿನಂತೆ ಮಗಳನ್ನು ಒಪ್ಪಿಸಿದರೆ ಒಡನೆಯೇ ರಾಜಧಾನಿಯನ್ನು ಆಕ್ರಮಿಸಿ, ರಾಜನೆಂದು ಸಾರಿಸಿಕೊಳ್ಳಬೇಕು; ಹಾಗಲ್ಲದೆ ವಿರೋಧವನ್ನೆಣಿಸಿ ದ್ರೋಹಮಾಡಿದರೆ ಕೂಡಲೇ ಆ ರಾಜಸ್ತ್ರೀಯರನ್ನು ಹೊರಕ್ಕೆಳೆದು ಭಂಗಪಡಿಸಬೇಕು" ಹೀಗೆಂದು ಸಂಕಲ್ಪಿಸಿ, ಕಡುರೋಷದಿಂದ ಮುಂದುವರಿದಿದ್ದನು. ತಾನು ಕಾವಲಿಗಿರಿಸಿದ್ದ ಭಟರನ್ನು ಸ್ವಲ್ಪವೂ ಅಳುಕದೆ, ಬೆದರದೆ, ಘಾತಿಸಿದ ಆ ಶತ್ರುಗಳು ತನ್ನನ್ನು ಎದುರಿಸಲಿಕ್ಕಾದರೂ ತಕ್ಕಂತೆ ಸಿದ್ಧಗೊಂಡಿರುವರೆಂದೇ ಅವನು ಶಂಕಿಸಿದನು. ಆ ಶಂಕೆಯಿಂದಲೇ ಬರುತ್ತ

ಮಾರ್ಗದ ಅಕ್ಕಪಕ್ಕದ ಗ್ರಾಮಗಳಿಂದಲೂ ಗಂಡಾಳುಗಳನ್ನೆಲ್ಲ ಹಿಡಿತರಿಸಿ ಎಲ್ಲರಿಗೂ ಕತ್ತಿ ದೊಣ್ಣೆ ಮಚ್ಚುಗಳನ್ನು ಕೊಡಿಸಿ ಜೊತೆಗೆ ಕರೆತಂದನು.

ತನ್ನ ಶತ್ರುಗಳು ರಾಜಧಾನಿಯ ಕೋಟೆಯ ಬಾಗಿಲುಗಳನ್ನು ಭದ್ರ ಗೊಳಿಸಿ ಸೈನ್ಯಸಮೇತರಾಗಿ ತನ್ನ ಸಂಗಡ ಕಾದಲು ಸಿದ್ಧರಾಗಿ ನಿಂತಿರುವರೆಂದು ನಾಯಕನು ಯೋಚಿಸಿದ್ದನು. ರಾಜಧಾನಿಯ ಕೋಟೆಯು ದೃಷ್ಟಿಗೋಚರ ವಾಯಿತು; ಆದರೆ ಅಲ್ಲಿ ಸೈನ್ಯವಾಗಲೀ ಮತ್ತಾವ ಬಗೆಯ ತಡೆಯಾಗಲೀ ಕಂಡುಬರಲಿಲ್ಲ. ಎಲ್ಲೆಲ್ಲೂ ಶಾಂತವಾಗಿದೆ. ತನಗೆ ಹೇಳಿಕಳುಹಿಸಿದ್ದಂತೆ, ಅದೇ ಮೂರನೆಯ ದಿನದ ಸಾಯಂಕಾಲವಾಗಿದ್ದರೂ, ಮದುವೆಯ ಸಂಬಂಧದ ಯಾವ ಸಿದ್ಧತೆಯೂ ಕಂಡುಬರಲಿಲ್ಲ. ನಾಯಕನಿಗೆ ಅದು ಆಶ್ಚರ್ಯವನ್ನು ಮಾತ್ರವೇ ಅಲ್ಲ, ಅನುಮಾನವನ್ನೂ ಉಂಟುಮಾಡಿತು. ಆದರೂ ಎದೆಗೆಡದೆ ಮುಂದೆ ನಡೆದು ನಗರದ ಮಹಾದ್ವಾರವನ್ನು ಸಮೀಪಿಸಿದನು.

ಆ ವೇಳೆಗೆ ಅಲ್ಲಿ ಅರಮನೆಯ ಗುರಿಕಾರನೊಬ್ಬನು ಕಾಣಿಸಿಕೊಂಡು ದಳಪತಿಗೆ ತಲೆಬಾಗಿ ವಂದಿಸಿ ಬೆಳ್ಳಿಯ ತಟ್ಟೆಯಲ್ಲಿಟ್ಟು ತಂದಿದ್ದ ಬೀಗದ ಕೈಗಳ ಕುಚ್ಚೊಂದನ್ನು ನೀಡಿ, ಒಪ್ಪಿಸಿಕೊಳ್ಳಬೇಕೆಂದು ಬಿನ್ನವಿಸಿದನು. ನಾಯಕನಿಗೆ ಪರಮಾಶ್ಚರ್ಯವಾಗಿ ಹೋಯಿತು. ಅದರ ಅರ್ಥವೇನೆಂದು ಅವನಿಗೆ ತೋರಲಿಲ್ಲ. “ಎಲೈ ನೀನು ಯಾರು? ಯಾರ ಕಡೆಯವನು? ನಿನ್ನನ್ನು ನೋಡಿದರೆ ಅರಮನೆಯ ಗುರಿಕಾರನೆಂಬಂತೆ ಕಂಡುಬರುತ್ತದೆ. ಈ ಬೀಗದ ಕೈಗಳ ಗೊಂಚಲೇನು? ಇದನ್ನು ಯಾರು ಕೊಟ್ಟರು? ರಾಜ ಧಾನಿಯಲ್ಲಿ ವಿಶೇಷವೇನು? ಎಲ್ಲವನ್ನೂ ವಿಸ್ತಾರವಾಗಿ ತಿಳಿಸು” ಎಂದನು.

“ಪ್ರಭುಗಳೇ! ಇವು ಕೋಟೆಯ, ಅರಮನೆಯ ಮತ್ತು ಬೊಕ್ಕಸದ ಬೀಗದ ಕೈಗಳು. ಮಹಾರಾಣಿಯವರು ಬೇರೆ ಯಾರನ್ನೂ ನಂಬದೆ ನನ್ನನ್ನು ಬಳಿಗೆ ಕರೆದು, ‘ದಳವಾಯಿ ಮಾರನಾಯಕರು ಬಂದರೆ ಇವುಗಳನ್ನು ಅವರಿಗೆ ಒಪ್ಪಿಸು;’ ಮುಂದೆ, ರಾಜರಾದ ಅವರು ನಿನ್ನನ್ನು ಸೇವಕಾವೃತ್ತಿಗೆಂದು ಇಟ್ಟು ಕೊಂಡರೆ ಅವರ ಬಳಿ ಇರು; ಹಾಗಿಲ್ಲದಿದ್ದರೆ ನಿನ್ನ ಮನಸ್ಸುಬಂದೆಡೆಗೆ ಹೋಗು’ ಎಂದು ಅಪ್ಪಣೆಮಾಡಿದರು, ಮಹಾಪ್ರಭೋ!” ಎಂದು ಬದಲು ಹೇಳಿದನು.

ಮಾರನಾಯಕನಿಗೆ ಆಗಲೂ ಸಂಗತಿಯೇನೆಂದು ತಿಳಿಯಲಿಲ್ಲ; ಆ ಕಥೆಯ ಆದ್ಯಂತಗಳೇ ತೋರಲಿಲ್ಲ. ಆಶ್ಚರ್ಯದಿಂದ ಪುನಃ ಅವನನ್ನು

ಕುರಿತು, "ಎಲೋ! ಇದೇನು ವಿಚಿತ್ರ? ಮಹಾರಾಣಿಯವರು ಈಗೆಲ್ಲಿದ್ದಾರೆ? ನಿನಗೆ ಇದನ್ನು ಕೊಟ್ಟ ತರುವಾಯ ಅವರು ಅರಮನೆಯಲ್ಲೇ ಇರುವರೊ ಅಥವಾ ಮತ್ತೆಲ್ಲಿಗಾದರೂ ಹೋದರೋ ಏನು ಸಂಗತಿ? ವಿಸ್ತಾರವಾಗಿ ಹೇಳು!" ಎಂದು ಆಜ್ಞಾಪಿಸಿದನು.

ಅದನ್ನು ಕೇಳಿ ಗುರಿಕಾರನು, "ಪ್ರಭುವೇ! ಲಾಲಿಸಬೇಕು. ಯಾರೋ ಹೆಸರು ದೆಸೆಗಳಿಲ್ಲದ ಬೇಜವಾಬ್ದಾರಿ ಜನರು, ತಾವು ಕೋಟೆಯ ಕಾವಲಿಗೆ ಇಟ್ಟಿದ್ದ ಜನರನ್ನು ಕೊಂದು ಬಿಟ್ಟಿದ್ದರಿಂದ ಮಹಾರಾಣಿಯವರು ಬಹು ಹೆದರಿ, ತಾವು ಕೋಪಗೊಂಡು ಎಲ್ಲಿ ರಾಜಧಾನಿಯ ಮೇಲೆ ದಂಡೆತ್ತಿ ಬಂದು ಎಲ್ಲರನ್ನೂ ಏನುಮಾಡಿ ಬಿಡುತ್ತೀರೋ ಎಂದು ನಡುಗಿ ಕಂಗೆಟ್ಟು, ಕೋಟೆಯ ಹೆಬ್ಬಾಗಿಲಿನ, ಅರಮನೆಯ ಮತ್ತು ಬೊಕ್ಕಸದ ಬೀಗದ ಕೈಗಳನ್ನು ತಮಗೆ ಒಪ್ಪಿಸತಕ್ಕುದೆಂದು ನನಗೆ ನೇಮಿಸಿ, ತಾವೆಲ್ಲೋ ಹೊರಟುಹೋದರು ಪ್ರಭೋ! ಅವರ ಬಂಧುಬಳಗದವರೂ ಮಿತ್ರರೂ ಸೇವಕರೂ ಮಹಾವೀರರಾದ ತಮ್ಮ ಕೋಪಾಗ್ನಿಗೆ ಆಹುತಿಯಾಗಲು ಅಂಜಿ, ಅವರವರ ಮನಸ್ಸು ಬಂದೆಡೆಗೆ ಚದುರಿಹೋಗಿದ್ದಾರೆ. ಭಟರ ಮರಣವಾರ್ತೆಯು ತಿಳಿದೊಡನೆಯೇ ನಾಯಕರು ಕೋಪಗೊಂಡು ರಾಜಧಾನಿಗೆ ತಪ್ಪದೆ ಬರುವರೆಂದೂ ಹಾಗೆ ರೋಷಾವೇಶದಿಂದ ಬಂದರೆ ಏನಾದರೊಂದು ಅನರ್ಥವಾಗದೆ ತಪ್ಪದೆಂದೂ ಊಹಿಸಿ, ತಮ್ಮನ್ನು ಸಂತೈಸುವುದಕ್ಕಾಗಿ ಮಹಾರಾಣಿಯವರು ಅವರ ಅರಮನೆ, ಅದರಲ್ಲಿನ ಭಂಡಾರ, ಕೋಟೆ ಮುಂತಾದ ಸರ್ವಸ್ವವನ್ನೂ ತಾವು ಒಪ್ಪಿಸಿಕೊಂಡು ಸಮಾಧಾನಗೊಳ್ಳಬೇಕೆಂದು ಬಿಟ್ಟುಕೊಟ್ಟು, ಕಣ್ಣಿಗೆ ಬೀಳಲು ಬೆದರಿ ಹೊರಟುಹೋದರು ಪ್ರಭೋ! ಈ ಸಂಗತಿಯನ್ನು ತಮಗೆ ತಿಳಿಸಬೇಕೆಂದು ನನಗೆ ಆಜ್ಞೆಮಾಡಿದರು" ಎಂದು ಬಿನ್ನವಿಸಿಕೊಂಡನು.

ಆ ಗುರಿಕಾರನಾಡುತ್ತಿದ್ದ ಮಾತುಗಳನ್ನು ಕೇಳಿ ಕೇಳಿದಂತೆ ನಾಯಕನ ಮನಸ್ಸಿನ ಆನಂದವೂ ಹೆಮ್ಮೆಯೂ ಹೆಚ್ಚುತ್ತಹೋದುವು; ದುರಭಿಮಾನದಿಂದ ಮೈಮರೆತು ತನ್ನ ಸಮಾನರಾದ ಧೀರರು ಲೋಕದಲ್ಲಿ ಮತ್ತಾರೂ ಇಲ್ಲವೆಂದುಕೊಂಡನು. ಆ ಸ್ಥಿತಿಯಲ್ಲಿ ಅವನಿಗೆ ಏನೂ ತೋರಲಿಲ್ಲ. ಯಾವನೋ ಒಬ್ಬನು ಕಾವಲಿನ ಭಟನನ್ನು ಕೊಂದ ಅತ್ಯಲ್ಪ ಕಾರಣಕ್ಕಾಗಿ ರಾಜಸ್ತ್ರೀಯರು ಸಮಸ್ತವನ್ನೂ ತ್ಯಜಿಸಿ ದಿಕ್ಕುದೆಸೆಯರಿಯದಂತೆ ಹೊರಟು

ಹೋಗುವುದು ಸಾಧ್ಯವೇ? ಅದು ನಿಜವಿರಬಹುದೆ? ಎಂಬ ಯೋಚನೆಯೂ ಅವನಿಗೆ ಬರಲಿಲ್ಲ. ಮನಸ್ಸಿನಲ್ಲುಂಟಾದ ಆ ಸಂತೋಷದ ಹೆಚ್ಚಳವು ಮೇರೆ ಮೀರಿತು; ದುರಭಿಮಾನವು ಮಿತಿಮೀರಿತು; ತನ್ನ ಮೀಸೆಗಳನ್ನು ತೀಡಿಕೊಳ್ಳುತ್ತ, ಸುತ್ತಲಿದ್ದ ತನ್ನವರನ್ನು ನೋಡಿ, ಹೀಗೆಂದು ಹೆಮ್ಮೆ ಕೊಚ್ಚಿಕೊಳ್ಳತೊಡಗಿದನು. "ಭಲೆ! ಭಲೆ! ನೋಡಿದಿರೋ ಮಾರನಾಯಕನ ಪ್ರತಾಪವನ್ನು! ನಾನು ಬರುತ್ತೇನೆಂದು ಕೇಳಿದೊಡನೆಯೇ ಗಡಗಡನೆ ನಡುಗಿಹೋದ ಆ ನರಕುನ್ನಿಗಳೇ ನಮ್ಮನ್ನು ಎದುರಿಸುವವರು! ನನ್ನ ಮೇಲೆ ಕೈಮಾಡುವ ವೀರನು ಯಾವನಿದ್ದಾನೆ ಈ ಮೈಸೂರಿನಲ್ಲಿ? ಮಾರನಾಯಕನೆಂದರೆ ಅವರು ಯಾರೆಂದು ತಿಳಿದಿದ್ದಾರೊ? ನಮ್ಮ ಹಿಂದಿನ ಜನಗಳು, ಪಾಪ! ಪುಟ್ಟುಗೋಚಿಯನ್ನು ಕಟ್ಟಿಕೊಂಡು ತೋಟಮಾಡಿ ವೀಳಯದೆಲೆಯನ್ನು ಬೆಳೆದು ತಂದು ಅರಮನೆಯ ಬಾಗಿಲಲ್ಲಿಟ್ಟುಕೊಂಡು ಅಲ್ಲಿದ್ದ ಸೇವಕರಲ್ಲಿ ಹಲ್ಗಿರಿದು ನಾಲ್ಕು ಕಾಸುವೀಸುಗಳನ್ನು ಸಂಪಾದಿಸಿ ಜೀವಿಸಿದರಲ್ಲವೆ? ಆದರೆ ಇಲ್ಲಿ ನೋಡಿ, ಈ ಭೂಪ ಮಾರನಾಯಕನನ್ನು! ವೀರಾಧಿವೀರನಾದ ನನಗೂ ಕಂಗಾಲಿಗಳಂತೆ ಜೀವಿಸಿದ ಆ ನನ್ನ ಹಿರಿಯರಿಗೂ ಏನಾದರೂ ಹೋಲಿಕೆಯುಂಟೆ? ಅಜಗಜಾಂತರ! ಅವರ ಕುಲದಲ್ಲೇ ಹುಟ್ಟಿದರೂ, ಕೆಸರಿನಲ್ಲಿ ಹುಟ್ಟಿಬಂದ ಕಮಲದಂತೆ, ಜಗತ್ಪ್ರಸಿದ್ಧನಾದನಲ್ಲವೆ ಈ ಶೂರ ಮಾರನಾಯಕನು! ತನ್ನನ್ನು ಹೆತ್ತ ಬಡತಾಯಿಯನ್ನು ರಾಜಮಾತೆಯೆಂಬ ಕೀರ್ತಿಗೇರಿಸಿದ ಪ್ರಭು ಮಾರನಾಯಕನಿಗೆ ಸರಿಯೇ ನರಕುರಿಗಳಂತಿರುವ ಇತರ ಜನರು? ಭಲೆ ಭಲೆ, ನನ್ನ ಸಮಾನರಿನ್ನಾರು! ಇನ್ನು ಕಾರುಗಹಳ್ಳಿಯ ನರಕವಾಸವು ತಪ್ಪಿಹೋಯಿತು. ರಾಜಧಾನಿಯ ಮಹಾದ್ವಾರವನ್ನು ಹೊಕ್ಕ ಕ್ಷಣದಿಂದ ಸ್ವರ್ಗವನ್ನು ಸೂರೆಗೊಂಡಂತೆ ತನ್ನ ವಂಶವನ್ನೂ ಕುಲವನ್ನೂ ಉದ್ಧರಿಸಿದನು ಮಾರನಾಯಕನು. ನನ್ನ ಪ್ರಿಯಗೆಳೆಯರೇ, ಬನ್ನಿ ಬನ್ನಿ. ರಾಯನ ಗದ್ದುಗೆಯನ್ನೇರಿ ಸಕಲ ವೈಭವಗಳಿಂದ ರಾಜ್ಯಭಾರ ಮಾಡೋಣ. ಇನ್ನು ಈ ರಾಜಧಾನಿಯಲ್ಲಿ ನಮ್ಮನ್ನು ಎದುರಿಸುವ ಗಂಡಸು ಯಾರು? ಪ್ರಶ್ನೆಮಾಡುವ ಧೀರನು ಯಾರು? ಓಲೈಸದಿರುವ ಎದೆಗಾರನು ಯಾರು?" ಎಂದು ಮೈಮರೆತು, ಮನಬಂದಂತೆಲ್ಲ ತನ್ನ ಶೌರ್ಯಪ್ರತಾಪಗಳನ್ನು ಕೊಚ್ಚಿಕೊಳ್ಳುತ್ತ ಅಬ್ಬರಿಸುತ್ತಿದ್ದನು.

ಹೀಗೆ ಹೇಳುತ್ತ ಹೇಳುತ್ತ ಮುಂದುವರಿಯುತ್ತಿರಲು, ಅವನು ಹತ್ತಿದ್ದ ಕುದುರೆಯು ಕೋಟೆಯ ಹೆಬ್ಬಾಗಿಲಿನ ಒಳಹೊಕ್ಕಿತು. ಅವನೊಂದಿಗೇ ಅವನ ಮುಖ್ಯ ಮುಖ್ಯ ಅನುಚರರಾದ ಹತ್ತೆಂಟು ಮಂದಿಯೂ ಹೊಕ್ಕರು. ಇನ್ನೂ ಇಪ್ಪತ್ತು ಮೂವತ್ತು ಮಂದಿ ಭಟರೂ ಒಳಕ್ಕೆ ನುಗ್ಗಿದರು. ಕೋಟೆಯ ಬಾಗಿಲ ಬಳಿಗೆ ಬರುವ ವೇಳೆಗೇ ಬೀಗದ ಕೈಗಳ ಗೊಂಚಲು ತನ್ನ ಸ್ವಾಧೀನಕ್ಕೆ ಬಂದುಬಿಟ್ಟುದರಿಂದ, ಇನ್ನು ಯುದ್ಧಪ್ರಸಂಗವೆಲ್ಲಿ ಬಂತೆಂದು ಯೋಚಿಸಿ, ನಾಯಕನು ಮಿಕ್ಕ ಹೆಚ್ಚು ಜನರ ಗುಂಪೆಲ್ಲ ಕೋಟಯ ಹೊರಗೇ ಕುಳಿತಿರಲೆಂದು ಅಪ್ಪಣೆಮಾಡಿ ಹೇಳಿಕಳುಹಿಸಿದನು.

ನಾಯಕನೊಂದಿಗೆ ಒಳಹೊಕ್ಕವರೆಲ್ಲರೂ ಬಾಗಿಲನ್ನು ದಾಟಿ ಎರಡು ಹೆಜ್ಜೆ ಮುಂದಿಟ್ಟರು. ಕೋಟೆಯ ಹೆಬ್ಬಾಗಿಲು ಒಡನೆಯೇ ಧಡೀರೆಂದು ಮುಚ್ಚಿಕೊಂಡಿತು. ಆ ಶಬ್ದಕ್ಕೆ ನಾಯಕನ ಕುದುರೆಯು ಬೆಚ್ಚಿ ಕ್ಷಣಕಾಲ ಒಂದೆಡೆಯಲ್ಲಿ ನಿಲ್ಲಲಾರದೆ ಮನಬಂದಂತೆ ಕುಣಿದಾಡಿತು. ನಾಯಕನು ಹಿಂದಿರುಗಿ ನೋಡುತ್ತಾನೆ! ಹೆಬ್ಬಾಗಿಲ ಬಳಿ ಯಾರೂ ಇಲ್ಲ. ಕುದುರೆಯ ಹುಚ್ಚಾಪಟ್ಟೆ ಕುಣಿದಾಟದಿಂದ ನಾಯಕನು ಆಯತಪ್ಪಿ ನೆಲಕ್ಕೆ ಬಿದ್ದನು. ಒಡನೆಯೇ ಎದ್ದುನಿಂತು ಗಾಬರಿಯಿಂದ "ಎಲ ಎಲಾ! ಇದೇನಾಶ್ಚರ್ಯ! ಬಾಗಿಲೇಕೆ ಮುಚ್ಚಿಕೊಂಡಿತು? ಮುಚ್ಚಿದವರು ಯಾರು? ನಮ್ಮ ಕಡೆಯ ಜನರೆಲ್ಲ ಹೊರಗೇ ಉಳಿದುಹೋದರಲ್ಲ! ಬೀಗದ ಕೈಗಳ ಗೊಂಚಲನ್ನು ತಂದಿದ್ದ ಆ ಗುಂಕಾರನೆಲ್ಲಿ?" ಎಂದು ಗಾಬರಿಗೊಂಡು ಅಲ್ಲಲ್ಲಿ ಹುಡುಕಿಸಿದನು; ಅವನು ಎಲ್ಲೂ ಕಂಡುಬರಲಿಲ್ಲ. ಹೀಗೆ ಕ್ಷಣಮಾತ್ರದಲ್ಲಿ ನಡೆದುಹೋದ ಈ ಕಾರ್ಯದಿಂದ ಧಕ್ಕೆ ಬಡಿದಂತಾದರೂ ಎದೆಗುಂದದೆ, ನಾಯಕನು ಪುನಃ ಧೈರ್ಯ ತಂದುಕೊಂಡು, "ಎಲೋ ಏನು ನೋಡುತ್ತೀರೋ! ಬೆದರಬೇಡಿ; ಎಲ್ಲಿ! ಈ ದೂಲವನ್ನೆತ್ತಿ ಬಾಗಿಲು ತೆಗೆಯಿರಿ; ಹೊರಗಿರುವವರೆಲ್ಲ ಒಳಕ್ಕೆ ಬರಲಿ. ಇದೇನೋ ಮೋಸವಾಗಿದೆ" ಎಂದುಕೊಂಡನು. ತಾನೂ ಕುದುರೆಯಿಂದ ಇಳಿದು ಎಲ್ಲರೊಂದಿಗೆ ಕೈಕೊಟ್ಟು ಆ ಹೆಬ್ಬಾಗಿಲನ್ನು ತೆರೆಯಲು ಸಾಹಸಪಡತೊಡಗಿದನು.

ಹೊತ್ತುಮುಳುಗುವ ಸಮಯ; ಕತ್ತಲಾದ ಮೇಲೆ ಕೋಟೆಯೊಳಗಡೆ ಸಿಕ್ಕಿಬೀಳುವ ತನ್ನ ಗತಿಯೇನೆಂದು ನಾಯಕನು ಚಿಂತೆಗೀಡಾಗಿ, ಅಷ್ಟರೊಳ

ಗಾಗಿ ಸರ್ವಸಾಹಸಮಾಡಿ ಹೆಬ್ಬಾಗಿಲನ್ನು ತೆರೆಯಬೇಕೆಂದು ಹವಣಿಸಿದನು; ಆದರೆ ಅದು ಸಾಧ್ಯವಾಗಲಿಲ್ಲ. ಅಷ್ಟರಲ್ಲಿ, ಸುತ್ತಲಿನ ಆಳವೇರಿಗಳ ಕಡೆಯಿಂದ ಬಾಣಗಳು ಮಳೆಯಾಗಿ ಸುರಿಯಲಾರಂಭಿಸಿದುವು. ಅವುಗಳನ್ನು ಯಾರು ಎಲ್ಲಿಂದ ಹೊಡೆಯುತ್ತಿರುವರೆಂದು ಕಾಣಿಸದು. ತನ್ನೊಡನೆ ಕೋಟೆಯೊಳಕ್ಕೆ ಬಂದ ಒಬ್ಬೊಬ್ಬರೂ ಆ ಬಾಣಗಳ ಏಟಿಗೆ ಸಿಕ್ಕಿ ಗಾಸಿಪಡುತ್ತಿದ್ದುದನ್ನು ಕಂಡು ನಾಯಕನು ಕಂಗೆಟ್ಟನು. ಆದರೂ ಭಯಪಟ್ಟಂತೆ ತೋರಿಸಿಕೊಳ್ಳದೆ ತನ್ನ ಕಡೆಯ ನಾಲ್ವರನ್ನು ಕರೆದು, ಕೋಟೆಯ ಗೋಡೆಯನ್ನು ಹತ್ತಿ ಹೊರಗಿದ್ದವರಿಗೆ ಆ ಸಂಗತಿಯನ್ನು ತಿಳಿಸಿರೆಂದು ನೇಮಿಸಿದನು. ಹಾಗೆ ಅವರು ಹತ್ತಿ ಅರ್ಧಮಟ್ಟಕ್ಕೆ ಏರಿದರೆಂಬ ವೇಳೆಗೆ ಎಲ್ಲಿಂದಲೋ ನಾಲ್ಕಾರು ಹರಿತವಾದ ಬಾಣಗಳು ಬಂದು ತಗಲಿ ಅವರು ನೆಲಕ್ಕೆ ಬಿದ್ದು ಒರಗಿದರು. ಅದನ್ನು ಕಂಡು ನಾಯಕನ ರೋಷ ಮಿತಿಮೀರಿತು. ಕೈಕತ್ತಿಯನ್ನು ಝಳಪಿಸುತ್ತ ಮುಂದುವರಿದು ಕೇಕೆಹಾಕುತ್ತ "ಎಲೆಲಾ! ನನ್ನನ್ನು ಹೀಗೆ ಮೋಸಗೊಳಿಸಲು ಯೋಚಿಸಿದಿರಾ! ಇದರ ಫಲವನ್ನು ಅನುಭವಿಸಿರಿ" ಎಂದು ಆ ರೋಷಭರದಲ್ಲಿ, ಎದುರಿಗಿದ್ದ ಇಬ್ಬರನ್ನು ಕಡಿದುರುಳಿಸಿದನು. ಪಾಪ! ಅವರು ಸಾಮಾನ್ಯ ವೇಷದಲ್ಲಿದ್ದ ರಾಜಭಟರು.

ತಮ್ಮ ಕಡೆಯ ಇಬ್ಬರು ಭಟರು ಅಕಾರಣವಾಗಿ ನಾಯಕನ ಕತ್ತಿಗೆ ಬಲಿಯಾದರೆಂದು ಕೇಳಿದೊಡನೆಯೇ ರಾಜಪುತ್ರರು ಇನ್ನು ಸಾವಕಾಶಮಾಡಲಾಗದೆಂದು ಭಾವಿಸಿದರು. ಅರಮನೆಯ ಕಡೆಯಿಂದ ತುತೂರಿಯ ಶಬ್ದವೊಂದು ಕೇಳಿಸಿತು. ಸ್ವಲ್ಪಹೊತ್ತಿನಲ್ಲಿಯೇ ಸುತ್ತಲಿನ ಪ್ರದೇಶಗಳಿಂದ ನೂರಾರು ಸಂಖ್ಯೆಯ ರಾಜಭಟರು ಯದುರಾಯರ ಆಜ್ಞೆಯಿಂದ ಹೊರಬಿದ್ದು, ನಾಯಕನ ಗುಂಪಿನವರನ್ನು ಸುತ್ತಿಕೊಂಡರು.

ಮಾರನಾಯಕನು ತನ್ನ ಕಡೆಯ ಬಹು ಸ್ವಲ್ಪ ಮಂದಿಯನ್ನು ಸುತ್ತುವರಿದಿದ್ದ ನೂರಿನ್ನೂರು ಮಂದಿ ಶತ್ರುಸೈನಿಕರನ್ನು ಕಂಡು, ಮುಂದೆ ಉಪಾಯ ತೋರದೆ ಕ್ಷಣಕಾಲ ಭ್ರಾಂತನಂತೆ ನಿಂತುಕೊಂಡನು. ಆದರೂ ಕಂಗೆಡದೆ ಕೈಕತ್ತಿಯನ್ನು ಝಳಪಿಸುತ್ತ ಸುತ್ತಮುತ್ತಲಿದ್ದವರನ್ನು ಘಾತಿಸಿ, ಅರಮನೆಯ ಕಡೆಗೆ ನುಗ್ಗತೊಡಗಿದನು. ಆಗ ಆವರೆಗೆ ನಡೆದುದನ್ನೆಲ್ಲ ಮರೆಯಲ್ಲಿ

ನಿಂತು ನೋಡುತ್ತಿದ್ದ ಯದುರಾಯರೂ ಕೃಷ್ಣರಾಯರೂ ಗಂಭೀರವಾದ ನಡಿಗೆಗಳನ್ನಿಡುತ್ತ ಹೊರಕ್ಕೆ ಬಂದು ಕಾಣಿಸಿಕೊಂಡರು.

ಆ ವೇಳೆಗೆ ಅರಮನೆಯ ಎದುರಿನ ವಿಸ್ತಾರವಾದ ಬಯಲಿಗೆ ನಡೆದು ಬಂದಿದ್ದ ಮಾರನಾಯಕನು, ದಿವ್ಯಾಯುಧಗಳನ್ನು ಧರಿಸಿದ್ದ ಭವ್ಯಾಕೃತಿಯ ಆ ಆಜಾನುಬಾಹು ವ್ಯಕ್ತಿಗಳನ್ನು ಕಂಡು, ಸಿಡಿಲು ಬಡಿದಂತೆ ಸುಮ್ಮನೆ ನಿಂತು ಬಿಟ್ಟನು. ತಾನು ಎಂತಹ ಅಪಾಯಸ್ಥಿತಿಯಲ್ಲಿದ್ದನೆಂಬುದು ಆಗ ಅವನ ಬುದ್ಧಿಗೆ ಹೊಳೆಯಿತು. ಸುತ್ತಲೂ ಶತ್ರುಗಳ ಸೈನ್ಯ ಮುತ್ತಿದೆ; ಹೊರಕ್ಕೆ ಹೋಗಿ ಬದುಕೋಣವೆಂದರೆ ಕೋಟೆಯ ಬಾಗಿಲು ಮುಚ್ಚಿದೆ; ಎದುರಿಗೆ ಮೃತ್ಯುವೇ ಪಾಶವನ್ನು ಧರಿಸಿ ಎದುರಾದಂತೆ ತೀಕ್ಷ್ಣವಾದ ಆಯುಧಗಳನ್ನು ಧರಿಸಿದ ವೀರ ಯೋಧರು ನಿಂತಿದ್ದಾರೆ. ಆ ಸನ್ನಿವೇಶವನ್ನು ನೋಡಿ ನಾಯಕನ ಮನಸ್ಸನ್ನು ಭೀತಿಯಾವರಿಸಿತು; ತಾನು ಕೆಟ್ಟೆನೆಂದುಕೊಂಡು ಬೆದರಿದನು. ಕ್ಷಣಕಾಲ ಮುಂದೆ ಏನು ಮಾಡಬೇಕೆಂದು ಅವನಿಗೆ ತೋರಲಿಲ್ಲ.

ಆಗ ಅವನು, "ಅಯ್ಯೋ, ನಾನಾಗಿ ಇಂತಹ ದುರ್ಗತಿಯನ್ನು ತಂದಿಟ್ಟು ಕೊಂಡೆನು. ತೊಟ್ಟಿಲಿನ ಶಿಶುವಾಗಿದ್ದಾಗಿನಿಂದ ಪರದೇಶಿಯಾಗಿದ್ದ ನನ್ನನ್ನು ತಂದೆಗಿಂತಲೂ ಹೆಚ್ಚಾದ ಪ್ರೀತಿಯಿಂದ ಅನ್ನವನ್ನಿಟ್ಟು ಕಾಪಾಡಿದ ಶ್ರೀ ಚಾಮರಾಜರ ಪಾದಕ್ಕೆ ದ್ರೋಹಮಾಡಿ ಇಂದು ನಾನಾಗಿ ಮೃತ್ಯುವನ್ನು ತಂದುಕೊಂಡೆನು. ತಾಯಿಯಂತೆ ಹಾಲಿತ್ತು ಪೋಷಿಸಿದ ದೇವಾಜಮ್ಮಣ್ಣಿ ಯವರ ಪಾದಕ್ಕೆ ತಪ್ಪಿನಡೆದು ಮಾತೃದ್ರೋಹಿಯಾದೆನು. ಯಾರ ಅನ್ನವ ನ್ನುಂಡು ಈ ದೇಹವು ಬೆಳೆಯಿತೋ ಆ ರಾಜಮನೆತನದ ಗೌರವ ಪ್ರತಿಷ್ಠೆ ಗಳನ್ನು ಲಕ್ಷ್ಯಮಾಡದೆ ಶ್ರೇಷ್ಠಕುಲದ ರಾಜಪುತ್ರಿಯನ್ನು ಅಪೇಕ್ಷಿಸಿ ಸ್ವಾಮಿ ದ್ರೋಹಿಯಾದೆನು. ನನ್ನನ್ನೂ ನನ್ನ ಕುಲವನ್ನೂ ಭೂಷಿಸಿ ನನಗೆ ಜೀವ ನೋಪಾಯವನ್ನು ಕಲ್ಪಿಸಿಕೊಟ್ಟು ಗೌರವ ಪ್ರತಿಷ್ಠೆಗಳಿಗೆ ಪಾತ್ರನನ್ನಾಗಿ ಮಾಡಿದ ಮಹಾರಾಜರು ಏರಿ ಅಲಂಕರಿಸಿದ್ದ ಸಿಂಹಾಸನವನ್ನು ಅಪಹರಿಸುವ ಉದ್ದೇಶಮಾಡಿ ರಾಜದ್ರೋಹಿಯಾದೆನು. 'ಎಲಾ ಮಾರನಾಯಕಾ, ಈ ಸಾರಿ ನೀನು ಈ ಯುದ್ಧಕಾರ್ಯವನ್ನು ನಿಲ್ಲಿಸು. ನಿನಗೆ ಜಯಕಾಲವಿಲ್ಲ' ಎಂದು ಸೂಚನೆಕೊಟ್ಟ ಕುಲದೇವತೆಯನ್ನು ಲಕ್ಷ್ಯಮಾಡದೆ ನಿಂದಿಸಿ ಕಿತ್ತು ತಿಪ್ಪೆಗೆಸೆದು ದೈವದ್ರೋಹವನ್ನು ಕಟ್ಟಿಕೊಂಡೆನು. ಹೀಗೆ ಬಹು ಪರಿಯಿಂದ

ದುರುಳತನವನ್ನೆಸಗಿ, ಕೇಡಿಗನಾಗಿ ಬದುಕಿ ನಾಶವನ್ನು ತಂದಿಟ್ಟುಕೊಂಡ ನಾನು ಈಗ ಚಿಂತಿಸಿ ಫಲವೇನು? ಇನ್ನು ನನ್ನ ಆಯುಸ್ಸು ತೀರಿತು" ಎಂಬ ಹಲವು ಬಗೆಯ ಯೋಚನೆಗಳು ಮನಸ್ಸಿಗೆ ಬಂದುವು. ಆ ಸಂದರ್ಭದಲ್ಲಿ ಮುಂದೆ ಏನು ಮಾಡಬೇಕೆಂದು ತೋರಲಿಲ್ಲ. ಹಾಗೆಯೇ ಕ್ಷಣಕಾಲ ತಡೆದು, "ಸರಿ! ಇನ್ನು ಯೋಚಿಸಿ ಮಾಡುವುದೇನು? ಈವರೆಗೆ ಕತ್ತಿಯನ್ನು ಹಿಡಿದು ವೀರನಂತೆ ಬದುಕಿದ ನಾನು ವೀರನಂತೆಯೇ ಸಾಯಬೇಕು. ಈಗ ಇವರಿಗೆ ಶರಣಾಗತನಾಗಿ ಅಥವಾ ಸೆರೆಸಿಕ್ಕಿ ನರಳಿ ನಾಯಾಗಿ ಸಾಯುವುದಕ್ಕಿಂತ ಈ ಕತ್ತಿಯಿಂದಲೇ ನನ್ನ ಗತಿಯನ್ನು ಸಾಧಿಸಿಕೊಳ್ಳತಕ್ಕುದು ಯೋಗ್ಯವಾದ ಕೆಲಸ'' ಎಂದು ಯೋಚಿಸಿ ನಿಶ್ಚಯಮಾಡಿಕೊಂಡನು. ಅವನ ಸೌಭಾಗ್ಯವು ಅಳಿದಂತೆ, ಆ ವೇಳೆಗೆ ಸೂರ್ಯನೂ ಅಸ್ತಮಿಸಿದನು.

ನಾಯಕನು ಹೀಗೆ ತನ್ನ ಮರಣವನ್ನು ನಿಶ್ಚಯಿಸಿಕೊಂಡು, ಮೃಗರಾಜನನ್ನು ಎದುರಿಸಿ ಮುನ್ನುಗ್ಗುವ ಮದಿಸಿದ ಕಾಡುಕೋಣನಂತೆ, ಆ ರಾಜಪುತ್ರರ ಮೇಲೆ ನುಗ್ಗಿದನು. ಅವರನ್ನು ಕಂಡು ಸಿಂಹನಾದ ಮಾಡುತ್ತ ''ಹ ಲ ಲ ಲ ಲ ಲ! ಯಾರೆಲಾ ನೀವು? ಕಳ್ಳರಂತೆ ಮರೆಯೊಳಗಿದ್ದು ಈ ಧೀರ ಮಾರನಾಯಕನನ್ನು ಮೋಸಗೊಳಿಸಿ ಕೊಲ್ಲಬೇಕೆಂದು ಯೋಚಿಸಿದಿರಾ? ನಾನು ಯಾರೆಂದು ತಿಳಿದಿರಿ? ಧೀರರಾದರೆ ಎದುರಾಗಿರಿ; ಕೈಗಳಲ್ಲಿ ದೃಢವಾಗಿ ಆಯುಧಗಳನ್ನು ಹಿಡಿದು, ಅಖಾಡದಲ್ಲಿ ನಿಲ್ಲಿರಿ; ಪರದೇಶಿಗಳಾಗಿ ಬಂದ ನಿಮ್ಮನ್ನು ಈ ವೀರನು ಲಕ್ಷ್ಯಮಾಡುವನೆಂದು ತಿಳಿದಿರಾ?'' ಎಂದು ಅಬ್ಬರಿಸುತ್ತ ಮೇಲೆ ನುಗ್ಗಿದನು.

ಆಗ ಯದುರಾಯರು, "ಎಲೋ ಕುನ್ನಿಯೆ! ಏನೆಂದು ಬೊಗಳುತ್ತಿರುವೆ? ಸಾಕುಮಾಡು. ಉಂಡ ಮನೆಗೆ ಎರಡೆಣಿಸಿ ಸ್ವಾಮಿದ್ರೋಹ, ಗುರುದ್ರೋಹ, ದೈವದ್ರೋಹಗಳೆಂದು ಲಕ್ಷ್ಯಮಾಡದೆ ನರಕದಲ್ಲಿಯ ಹುಳುವಾಗಲಿರುವ ನೀನು ಧೀರನೋ? ಪಾಪ! ಅಂತಃಪುರದಿಂದ ಹೊರಕ್ಕೆ ಬರಲರಿಯದ ಅಬಲೆಯರಾದ ಆ ರಾಜಸ್ತ್ರೀಯರನ್ನು ಬೆದರಿಸಿ, ಅವರ ಮಾನಪ್ರಾಣಗಳನ್ನು ಅಪಹರಿಸಲು ಹವಣಿಸಿದ್ದ ನೀನು ವೀರನೋ? ಅನ್ನವಿಟ್ಟು ಪೋಷಿಸಿದ್ದ ಸ್ವಾಮಿಯ ರಾಜ್ಯವನ್ನೇ ಅಪಹರಿಸಿ ಅವರ ಕುಟುಂಬವನ್ನು ಭ್ರಷ್ಟಗೊಳಿಸಿ ಸಂಕಟಪಡಿಸಲೆಳಸಿದ್ದ ನೀನು ಶೂರನೋ? ಎಲಾ, ನಿನ್ನಂತಹ

ಕೃತಘ್ನರಾದ ನಾಯಿಗಳನ್ನು ಕಟನಾಯಿ ಸೀಳಿ ಕೊಂದು ರಾಜಕುಟುಂಬ ವನ್ನು ಸಂರಕ್ಷಿಸತಕ್ಕುದು ನಮ್ಮ ಪವಿತ್ರ ಕರ್ತವ್ಯವು! ಎದೆಗುಂಡಿಗೆಯು ನಡುಗದಿದ್ದರೆ ಎದುರಾಗು!" ಎಂದು ನುಡಿದು, ಮುಂದೆ ಆ ದುರುಳನು ಒಂದು ಮಾತನ್ನಾಡಲೂ ಆಸ್ಪದಕೊಡದೆ ಖಡ್ಗವನ್ನು ತಿರುಗಿಸುತ್ತ, ಒಂದೇ ಹಾರಿಕೆಗೆ ಅವನ ಬಳಿಗೆ ನೆಗೆದು ನಿಂತು ಎದುರಿಸಿದರು.

ಮಾರನಾಯಕನಿಗೆ ಮುಂದೆ ಯೋಚಿಸಲೂ ಅತ್ತಿತ್ತ ನೋಡಿಕೊಳ್ಳಲೂ ಆಸ್ಪದವಿಲ್ಲದಿರಲು ತಾನೂ ಕೈಕತ್ತಿಯನ್ನು ತಿರುಗಿಸುತ್ತ, ಅವರ ಮೇಲೆ ಬರತೊಡಗಿದನು. ಕ್ಷತ್ರಿಯೋತ್ತಮರೂ ವೀರಾಗ್ರೇಸರೂ ಆದ ಯದುರಾಯರ ಕರ ಚಮತ್ಕೃತಿಯೆಲ್ಲಿ? ಪರದ್ರೋಹದಿಂದಲೇ ದೇಹವನ್ನು ಪೋಷಿಸಿ, ಹಂದಿ ಯಂತೆ ಕೊಬ್ಬಿ, ನರಿ ಕಾಡುಕೋಣ ಕಿರಬಗಳನ್ನು ಘಾತಿಸಲು ಆಯುಧವನ್ನು ಧರಿಸಿದ ನಾಯಕನ ಕೈ ಚಳಕವೆಲ್ಲಿ? ಆದರೂ ಕೆಲಹೊತ್ತು ಇಬ್ಬರಿಗೂ ಭಯಂಕರ ಯುದ್ಧವಾಯಿತು. ನಾಯಕನು ಅವರು ತನ್ನ ಶಕ್ತಿಗೆ ಮೀರಿದ ಎದುರಾಳಿಗಳು ಎಂಬುದನ್ನು ತಿಳಿದೊಡನೆಯೇ ಯುದ್ಧಮರ್ಯಾದೆಯನ್ನು ಮೀರಿ, ಮನಬಂದಂತೆ ಆಯುಧವನ್ನು ಪ್ರಯೋಗಿಸತೊಡಗಿದನು. ಅದನ್ನು ಕಂಡು ಯದುರಾಯರು, "ಇನ್ನು ಇವನೊಂದಿಗೆ ಆಟ ಸಾಕು; ಶೀಘ್ರವಾಗಿ ಇವನನ್ನು ತೀರಿಸದಿದ್ದರೆ ಪರಿಣಾಮವಿಲ್ಲ'' ಎಂದುಕೊಂಡರು. ಅವರ ದಿವ್ಯ ಚಂದ್ರಾಯುಧವು ಹಲವು ವರಸೆಗಳಲ್ಲಿ ಸುತ್ತಿ ಬಂದು ಒಮ್ಮೆ ಅವನ ಕತ್ತಿನ ಮೇಲೆರಗಿತು. ಅಷ್ಟೆ! ಆವರೆಗೆ ಕೈಕಾಲುಗಳನ್ನಾಡಿಸುತ್ತ, ಬಾಯಿಗೆ ಬಂದಂತೆ ಅರಚುತ್ತಿದ್ದ ನಾಯಕನ ದೇಹವು ವೀರಮುಂಡಿಯಲ್ಲಿ ಚಿತ್ರಪ್ರತಿಮೆಯಂತೆ ನಿಶ್ಚೇಷ್ಟಿತವಾಗಿ ಕುಳಿತುಬಿಟ್ಟಿತು. ಸುತ್ತಲೂ ಅಲ್ಲಲ್ಲಿ ನಿಂತು ಈ ಕಾಳಗ ವನ್ನು ನೋಡುತ್ತಿದ್ದವರೂ, ಅತ್ತ ಅರಮನೆಯ ಕಿಟಕಿಗಳಿಂದ ಈ ರಣಾಂಗಣ ವನ್ನು ನೋಡುತ್ತಿದ್ದ ರಾಜಸ್ತ್ರೀಯರೂ "ಅಯ್ಯೋ! ಇದೇನು! ರಾಜ ಪುತ್ರರು ಕತ್ತಿಯ ವರಸೆಯನ್ನು ನಿಲ್ಲಿಸಿಬಿಟ್ಟರಲ್ಲಾ! ಘಾತುಕನು ಸಮಯ ನೋಡಿ ಮೇಲೆ ಬಿದ್ದು ವಧಿಸಿದರೇನು ಗತಿ?'' ಎಂದು ಶಂಕಿಸತೊಡಗಿದರು.

ಆಗ ಧೀರ ಯದುರಾಯರು, ಹಸನ್ಮುಖದಿಂದ ತಮ್ಮ ಕೈಕತ್ತಿಯ ಚೂಪಾದ ತುದಿಯನ್ನು ಎದುರಾಳಿಯ ಹಣೆಗೆ ಸೋಕಿಸಿ ಹಿಂದಕ್ಕೆ ತಳ್ಳಿದರು. ಅಷ್ಟು ಮಾತ್ರಕ್ಕೇ ನಾಯಕನ ಶಿರವು ಮುಂಡದಿಂದ ಕಳಚಿ ಉರುಳಿ ಬಿತ್ತು.

ದೇಹದಿಂದ ಒಂದು ತೊಟ್ಟು ರಕ್ತ ಹರಿಯದಂತೆ ಅರಿವೀರನ ಕತ್ತನ್ನು ಕತ್ತರಿಸಿದ ಅವರ ಖಡ್ಗಯುದ್ಧದ ಚಮತ್ಕಾರವನ್ನು ಕಂಡು ಸಕಲರೂ ಪರಮಾಶ್ಚರ್ಯಪಟ್ಟರು. ಅಂತಃಪುರದ ಉಪ್ಪರಿಗೆಯಿಂದ ಜಾಳಂಧ್ರಗಳ ಮೂಲಕ ನೋಡುತ್ತಿದ್ದ ರಾಜಪತ್ನಿ ರಾಜಪುತ್ರಿಯರಂತೂ ಯದುರಾಯರ ಆ ಧೀರ ವರ್ತನೆಯನ್ನೂ ಯುದ್ಧನೈಪುಣ್ಯವನ್ನೂ ಕಂಡು ಪರಮಾನಂದ ಪಟ್ಟರು. ಕೆಳಕ್ಕೆ ಬಿದ್ದಿದ್ದ ಮಾರನಾಯಕನ ಶಿರವನ್ನು ಆ ವೀರಾಗ್ರಣಿಯು ಭಲ್ಲೆಯ ತುದಿಗೆ ಸಿಕ್ಕಿಸಿ ಮೇಲಕ್ಕೆತ್ತಿಸಲು, ಆವರೆಗೆ ಕೃಷ್ಣರಾಯರೊಂದಿಗೆ ಬೇರೊಂದೆಡೆಯಲ್ಲಿ ಕಾದಾಡುತ್ತಿದ್ದನಾಯಕನ ಕಡೆಯ ಭಟರು, ಆ ಭಯಂಕರ ದೃಶ್ಯವನ್ನು ಕಂಡು ನಡ ನಡುಗಿ, ತಮ್ಮ ಕೈಗಳಲ್ಲಿದ್ದ ಆಯುಧಗಳನ್ನು ದೂರಕ್ಕೆಸೆದು, ನೆಲಕ್ಕೆ ಮಂಡಿಯೂರಿ ಪ್ರಾಣಭಿಕ್ಷೆಯನ್ನು ಬೇಡಿಕೊಂಡರು.

ತರುವಾಯ ರಾಜಪುತ್ರರು, ಮಾರನಾಯಕನ ರುಂಡ ಮುಂಡಗಳನ್ನು ಆಯುಧಗಳಿಗೆ ಸಿಕ್ಕಿಸಿ ಕೋಟೆಯ ಬಾಗಿಲಿಗೆ ತೋರಣದಂತೆ ಕಟ್ಟಿಸಿ ಹೆಬ್ಬಾಗಿಲನ್ನು ತೆರೆಯಿಸಿದರು. ಆ ಭಯಂಕರ ನೋಟವನ್ನು ನೋಡಿ, ಹೊರಗೆ ನೆರೆದಿದ್ದ ಜನರೆಲ್ಲ ಬೆದರಿ ದಿಕ್ಕುಪಾಲಾಗಿ ಓಡಿಹೋದರು. ರಾಜ ಪುತ್ರರು ಶತ್ರುಗಳಿಂದ ಮತ್ತಾವ ಬಾಧೆಯೂ ಉಂಟಾಗದಂತೆ ನೋಡಿ ಕೊಳ್ಳಲು ಕಾವಲಿನ ಭಟರಿಗೆ ಆಜ್ಞಾಪಿಸಿ ಸಕಲರ ಜಯ ಜಯಕಾರಗಳನ್ನೂ ಕೇಳುತ್ತ ವಿಜಯೋತ್ಸವದಿಂದ ತಮ್ಮ ಬಿಡದಿಯ ಕಡೆಗೆ ನಡೆದರು.

---

## ೮ ವಿವಾಹ ಮಹೋತ್ಸವ, ಪಟ್ಟಾಭಿಷೇಕ

ರಾಜಸೇವಕರು ಅರಮನೆಗೆ ಬಂದು ದೇವಾಜಮ್ಮಣ್ಣಿಯವರನ್ನು ಕಂಡು ವಂದಿಸಿ, "ತಾಯೇ, ಜಯವಾಯಿತು ರಾಜಕುಮಾರರಿಗೆ! ಮಾರನಾಯಕನ ವಧೆಯಾಯಿತು; ಶತ್ರುಗಳೆಲ್ಲ ಶರಣಾಗತರಾದರು; ಮಿಕ್ಕ ದಂಡಿನವರೆಲ್ಲ ಓಡಿಹೋದರು'' ಎಂಬ ಹರ್ಷವಾರ್ತೆಯನ್ನು ಬಿನ್ನವಿಸಿ ಜಯ ಜಯಕಾರ ಮಾಡಿದರು. ಒಡನೆಯೇ ಆಕೆಯ ಕಣ್ಣುಗಳಲ್ಲಿ ಆನಂದಬಾಷ್ಪವು ಉಕ್ಕಿಬರಲು, ಮಹಾರಾಣಿಯು ಪಕ್ಕದಲ್ಲೇ ಕುಳಿತಿದ್ದ ರಾಜಪುತ್ರಿಯನ್ನು ಅಪ್ಪಿಕೊಂಡು,

'ಮಗಳೇ! ಇದು ನಿನ್ನ ಮಾಂಗಲ್ಯದ ಭಾಗ್ಯವಮ್ಮಾ! ನಿನ್ನ ಮನೆಯ ಜ್ಯೋತಿಯ ಸೌಭಾಗ್ಯವಮ್ಮಾ, ಇದು!' ಎಂದು ಆಶೀರ್ವದಿಸಿ ಕಣ್ಣೊರೆಸಿಕೊಂಡಳು. ಸಂತೋಷಾಧಿಕ್ಯದಿಂದ ಆಕೆಗೆ ಸ್ವಲ್ಪ ಹೊತ್ತು ಗಂಟಲ ನರಗಳು ಉಬ್ಬಿ ಏನು ಮಾತನಾಡಲೂ ಸಾಧ್ಯವಾಗಲಿಲ್ಲ. ಆದರೂ ಒಡನೆಯೇ ಕರಣಿಕರನ್ನೂ ಜಂಗಮಾರ್ಯನನ್ನೂ ಕರೆಯಿಸಿ, "ಅಯ್ಯಾ! ಆಪ್ತ ಬಂಧುಗಳೇ! ಈಗ ನೀವು ಅತ್ಯಗತ್ಯವಾಗಿ ಮಾಡಬೇಕಾದ ಕೆಲಸ ಒಂದಿದೆ. ರಾಜಪುತ್ರರು ರಣರಂಗದಲ್ಲಿ ಶತ್ರುವಧೆಮಾಡಿ ಜಯಲಕ್ಷ್ಮಿಯ ವಿಜಯಮಾಲಿಕೆಗೆ ಪಾತ್ರರಾಗಿರುವ ಈ ಸಂದರ್ಭದಲ್ಲಿ, ಅವರನ್ನು ತಕ್ಕಂತೆ ಗೌರವಿಸಿ ಅರಮನೆಗೆ ಕರೆತಂದು ಆದರಿಸಬೇಕಾದುದು ನಮ್ಮ ಪ್ರಥಮ ಕರ್ತವ್ಯ. ಆದುದರಿಂದ ನೀವು ಈಗಲೇ ಅರಮನೆಯ ಪಾಲಕಿಯನ್ನು ಕೊಂಡೊಯ್ದು ಓಲಗ ತಾಳ ಮೇಳಗಳೊಂದಿಗೆ ವಂದಿಮಾಗಧರು ಬಿರುದು ಪ್ರತಾಪಗಳನ್ನು ಹೊಗಳುತ್ತಿರಲು, ಭಟರು ಪರಾಕು ಹೇಳುತ್ತಿರಲು, ಮಹಾ ವೈಭವದಿಂದ ಆ ರಾಜಪುತ್ರರನ್ನು ನಗರದಲ್ಲಿ ಮೆರವಣಿಗೆ ಮಾಡಿಸಿ ಆನೆ ಬಾಗಿಲಿನಿಂದ ಒಳಹೊಗಿಸಿ ಅರಮನೆಗೆ ಕರೆತನ್ನಿರಿ. ದೃಷ್ಟಿಪರಿಹಾರಕವಾಗಿ ನೂರೆಂಟು ಇಡಿಗಾಯಿಗಳನ್ನು ಒಡೆಯಿಸಿರಿ. ಮುತ್ತೈದೆಯರು ಮುತ್ತುರತ್ನದ ಆರತಿಗಳನ್ನೆತ್ತಿ ಆದರಿಸಿ ಆಶೀರ್ವದಿಸಲಿ. ನಗರವು ಇಂದು ಯದುರಾಜ ಕುಮಾರರ ವಿಜಯವನ್ನು ಸಹಸ್ರಕಂಠಗಳಿಂದ ಕೀರ್ತಿಸಲಿ. ಈ ಆವಶ್ಯಕ ಕಾರ್ಯವನ್ನು ನೆರವೇರಿಸಲು ಲೇಶವೂ ಸಾವಕಾಶ ಮಾಡಬೇಡಿ" ಎಂದು ಆಜ್ಞಾಪಿಸಿದಳು.

ಯುದ್ಧರಂಗದಿಂದ ತಮ್ಮ ಬಿಡದಿಗೆ ನಡೆದು ಮಂಗಳ ಸ್ನಾನಮಾಡಿ, ಲಘು ಆಹಾರವನ್ನು ಸ್ವೀಕರಿಸಿ ವಿಶ್ರಮಿಸಿಕೊಳ್ಳುತ್ತಿದ್ದ ರಾಜಕುಮಾರರ ಬಳಿಗೆ ಕರಣಿಕರು ಬಂದು ಮಹಾರಾಣಿಯ ಅಪೇಕ್ಷೆಯನ್ನು ವಿಜ್ಞಾಪಿಸಿದರು. ವಿನಯ ವಿಭೂಷಿತರೂ, ಗಾಂಭೀರ್ಯ ನಿಧಿಗಳೂ ಆದ ಶ್ರೀ ಯದುರಾಯರು, "ಅಯ್ಯಾ ಬಾಂಧವರೇ, ಇಷ್ಟು ಮಾತ್ರ ಕಾರ್ಯಕ್ಕಾಗಿ ಆಡಂಬರದ ಈ ಮೆರವಣಿಗೆ ಏತಕ್ಕೆ? ಇದೇನು ಮಹತ್ಕಾರ್ಯವೆಂದು ಈ ವಿಜೃಂಭಣೆ?" ಎಂದು ಹೇಳಿ ಅದನ್ನು ನಿವಾರಿಸಲು ಯತ್ನಿಸಿದರು. ಆದರೆ ಕರಣಿಕರು, "ಪ್ರಭುವರ್ಯರೇ, ಹಾಗಲ್ಲ. ಈ ಸಂದರ್ಭದಲ್ಲಿ ಮಹಾರಾಣಿಯವರ ಉದ್ದೇಶವೇ ಬೇರೆ. ಈವರೆಗೆ ರಾಜ್ಯಕ್ಕಿದ್ದ ಕಂಟಕವು ನೀಗಿ ಸುರಕ್ಷಣೆಯು

ಪ್ರಾಪ್ತವಾಗಿರುವ ಈ ಸಂತೋಷ ಸಮಯದಲ್ಲಿ ಪ್ರಜೆಗಳಿಗೆ ಆನಂದದಾಯಕವಾದ ವಿಜಯೋತ್ಸವವನ್ನು ನಡೆಯಿಸುವುದು ಒಂದು ಆವಶ್ಯಕ ಕಾರ್ಯವೆಂದು ಅವರು ಭಾವಿಸಿದ್ದಾರೆ. ನೊಂದ ಮನದ ಮಹಾರಾಣಿಯವರ ಈ ಆನಂದಕ್ಕೆ ತಡೆಯಾಗದಂತೆ ತಾವು ಇದಕ್ಕೆ ದಯವಿಟ್ಟು ಸಮ್ಮತಿಸಬೇಕೆಂದು ಬೇಡುತ್ತೇವೆ'' ಎಂದು ಪ್ರಾರ್ಥಿಸಿ ಒಪ್ಪಿಸಿದರು.

ಒಡನೆಯೇ ಊರಿನ ರಾಜಮಾರ್ಗಗಳೆಲ್ಲ ತಳಿರು ತೋರಣ ಪತಾಕೆಗಳಿಂದ ಶೃಂಗಾರವಾದುವು; ಓಲಗ ತಾಳಮೇಳಗಳು ಭೋರ್ಗರೆದುವು; ನಾಗರಿಕರ ಸಂಭ್ರಮವನ್ನು ವರ್ಣಿಸಲು ಸಾಧ್ಯವಿಲ್ಲ. ರಾಜಪುತ್ರರು ಕುಳಿತ ಪಾಲಕಿಯನ್ನು ಹೂಮಾಲೆಗಳಿಂದಲೂ ಮುತ್ತಿನ ಸರಗಳಿಂದಲೂ ಸಿಂಗರಿಸಿ ನಗರದಲ್ಲಿ ಮೆರೆವಣಿಗೆ ಮಾಡಿಸಿ, ಆನೆ ಬಾಗಿಲಿನಿಂದ ಒಳಹೊಗಿಸಿ ಕರತಂದರು. ಎಲ್ಲೆಲ್ಲೂ ಸಂಭ್ರಮ, ಕೋಲಾಹಲ! ಪ್ರತಿ ಮನೆಯವರೂ ರಾಜಪುತ್ರರಿಗೆ ಆರತಿಯನ್ನೆತ್ತಿ ಇಡಿಗಾಯಿಗಳನ್ನೊಡೆದು ರಕ್ಷೆಯಿಟ್ಟು ಲಾಜಾಕ್ಷತೆಗಳನ್ನೆರಚಿ ಆಶೀರ್ವದಿಸಿದರು; ಊರಿನ ವೃದ್ಧ ಸುಮಂಗಲೆಯರು ಆ ರಾಜಶೇಖರರು ನೂರಾರು ಕಾಲ ಪತ್ನೀಪುತ್ರರೊಡಗೂಡಿ ಧರ್ಮದಿಂದ ರಾಜ್ಯಪರಿಪಾಲನೆ ಮಾಡಲೆಂದು ಆಶೀರ್ವದಿಸಿದರು.

ಮೆರವಣಿಗೆಯು ಹೀಗೆ ನಗರದ ಮುಖ್ಯ ಮುಖ್ಯ ಮಾರ್ಗಗಳಲ್ಲಿ ಸುತ್ತಿ ಅರಮನೆಯ ಬಳಿಗೆ ಬಂದಿತು. ಉತ್ಸವದೊಂದಿಗೆ ನಡೆತಂದು ಸಕಲ ಸಂಭ್ರಮಗಳಿಂದಲೂ ಅದನ್ನು ನಾಂಗಗೊಳಿಸಿದ ಕರಣಿಕರೂ ಜಂಗಮಾರ್ಯನೂ ಅರಮನೆಯ ಮಹಾದ್ವಾರದ ಬಳಿ ರಾಜಕುಮಾರರನ್ನು ಪಾಲಕಿಯಿಂದ ಇಳಿಸಿಕೊಂಡು ವಂದಿಮಾಗಧರೂ ರಾಜಭಟರೂ ಬಿರುದು ಪ್ರತಾಪಗಳನ್ನು ಹೊಗಳುತ್ತಿರಲು, ಸುವಾಸಿನಿಯರಿಂದ ಆರತಿಯನ್ನೆತ್ತಿಸಿದರು. ತರುವಾಯ ಒಳಕ್ಕೆ ಕರೆದೊಯ್ದು ರಾಜೋಚಿತ ದಿವ್ಯಪೀಠಗಳಲ್ಲಿ ಅವರನ್ನು ಕುಳ್ಳಿರಿಸಿ ಆ ಸಂಗತಿಯನ್ನು ಮಹಾರಾಣಿಯವರಿಗೆ ವಿಜ್ಞಾಪಿಸಿದರು. ದೇವಾಜಮ್ಮಣ್ಣಿಯವರು ಅವ್ವೆಯರೊಡನೆ ಬಂದು, ತೆರೆಯೊಳಗಡೆ ಪೀಠವನ್ನು ಅಲಂಕರಿಸಿದರು. ಆ ಸೂಚನೆಯನ್ನರಿತ ರಾಜಪುತ್ರರಿಬ್ಬರೂ ತಮ್ಮ ವಂದನೆಗಳನ್ನು ಅರ್ಪಿಸಿದರು.

ಆಗ ಸಂತುಷ್ಟರಾದ ಆ ಮಹಾರಾಣಿಯವರು, "ರಾಜಕುಲ ಶಿರೋಮಣಿಗಳೇ, ಶೌರ್ಯಸಾಹಸಗಳಿಂದ ದುಷ್ಟದಮನಮಾಡಿ ರಾಜ್ಯವನ್ನು ಕಂಟಕ ರಹಿತವಾಗಿಸಿ, ರಾಜಕುಟುಂಬದ ಮಾನಪ್ರಾಣಗಳನ್ನು ಕಾಪಾಡಿದ ತಮ್ಮನ್ನು ಯಾವ ಮಾತುಗಳಿಂದ ಅಭಿವಂದಿಸಬೇಕೋ, ಆದರಿಸಬೇಕೋ, ಯಾವ ಪದಾರ್ಥಗಳನ್ನು ಕಾಣಿಕೆಯಾಗಿ ಕೊಟ್ಟು ಸತ್ಕರಿಸಬೇಕೋ, ಅಲ್ಲದೆ ಹೇಗೆ ಕೃತಜ್ಞರಾಗಿರಬೇಕೋ ತೋರದುದಾಗಿದೆ. ಭಗವತೀ ಗಿರಿಜಾಂಬೆಯೂ ಶಂಕರಮೂರ್ತಿಯೂ ನಿಮಗೆ ಸಕಲ ಶ್ರೇಯಸ್ಸನ್ನೂ ಉಂಟುಮಾಡಲಿ. ನಮಗೆ ಇನ್ನು ನಿಮಗಿಂತಲೂ ಆಪ್ತರೂ ಹಿತಚಿಂತಕರೂ ಬೇರೆ ಯಾರಿದ್ದಾರೆ? ನೀವು ಮಾಡಿರುವ ಮಹೋಪಕಾರಕ್ಕೆ ನಾವೇನು ಪ್ರತಿಯಾಗಿ ಮಾಡಬಲ್ಲೆವು? ಆದರೂ, ಮೊದಲೇ ವಾಗ್ದಾನ ಮಾಡಿರುವಂತೆ, ನಮ್ಮ ಪುತ್ರಿಯನ್ನು ತಮ್ಮಲ್ಲಿ ಹಿರಿಯರಾದ ಶ್ರೀ ಯದುರಾಯರಿಗೆ ಧಾರೆಯೆರೆದು ಕೊಟ್ಟು ಪಾಣಿಗ್ರಹಣ ಮಹೋತ್ಸವದಲ್ಲಿ ಒಪ್ಪಿಸಲು ನಿಶ್ಚಯಿಸಿದ್ದೇವೆ; ದಯವಿಟ್ಟು ಸ್ವೀಕರಿಸಬೇಕು. ಈ ರಾಜ್ಯಪಾಲನೆಗಾದರೂ ತಾವಲ್ಲದೆ ಮತ್ತಾರು ದಕ್ಷರಿದ್ದಾರೆ? ಶ್ರೀ ವಿಷ್ಣುಮೂರ್ತಿಯು ಶ್ರೀದೇವಿ ಭೂದೇವಿಯರಿಂದೊಡಗೂಡಿ ಈ ಚರಾಚರ ಪೃಥ್ವಿಯನ್ನು ಪಾಲಿಸುವಂತೆ, ವಿಷ್ಣ್ವಂಶ ಸಂಭೂತರಾದ ನೀವೂ ಸಹ ರಾಜಪುತ್ರಿಯನ್ನೂ ಈ ಭೂದೇವಿಯನ್ನೂ ಪರಿಗ್ರಹಿಸಿ, ಪ್ರಜೆ ಪರಿವಾರಗಳನ್ನು ರಕ್ಷಿಸಿ ಪುತ್ರಪೌತ್ರ ಸೌಭಾಗ್ಯವನ್ನು ಪಡೆದು ಸಹಸ್ರಾರು ಕಾಲ ವಂಶೋನ್ನತಿ ಹೊಂದಿ ಸುಖವಾಗಿರಿ" ಎಂದು ಮಹಾರಾಣಿಯವರು ಸೇಸೆಯಿಟ್ಟು ಆಶೀರ್ವದಿಸಿದರು.

ಮಹಾರಾಣಿಯವರ ಆದರೋಕ್ತಿಗಳನ್ನು ಕೇಳಿ ಸಂತುಷ್ಟರಾದ ರಾಜಪುತ್ರರು ಆಕೆಯ ಪಾದಗಳಿಗೆ ನಮಸ್ಕರಿಸಿ, "ಮಹಾಮಾತೃಶ್ರೀಯವರೇ! ರಾಜ್ಯಕ್ಕೂ ರಾಜಕುಟುಂಬಕ್ಕೂ ದುರ್ದೈವ ವಶವಾಗಿ ಮಹಾವಿಪತ್ತು ಬಂದಿದ್ದ ಈ ವೇಳೆಯಲ್ಲಿ ಅಗಾಧ ಧೈರ್ಯದಿಂದಲೂ ದೂರಾಲೋಚನೆಯಿಂದಲೂ ಇಷ್ಟು ಕಾರ್ಯನಡೆಯಿಸಿ, ರಾಜ್ಯವು ಅನ್ಯಾಕ್ರಾಂತವಾಗದಂತೆಯೂ ಪ್ರಜೆಗಳು ಅನಾಥರಾಗದಂತೆಯೂ ರಕ್ಷಿಸಿದ ತಾವು ನಿಜವಾಗಿಯೂ ಈ ರಾಜ್ಯಕ್ಕೆ ಲಕ್ಷ್ಮೀಸ್ವರೂಪರು. ಈ ಆರ್ಷೇಯ ರಾಜಕುಟುಂಬಕ್ಕೆ ಯಥಾನುಶಕ್ತಿ ಸೇವೆ ಸಲ್ಲಿಸುವ ಈ ಅವಕಾಶವನ್ನು ಭಗವತಿಯು ನಮಗೆ ದಯಪಾಲಿಸಿ ನಮ್ಮನ್ನೂ

ಪುನೀತರನ್ನಾಗಿ ಮಾಡಿದುದು ನಮ್ಮ ಪುಣ್ಯೋದಯ. ನಮಗಾದರೂ ಆಪ್ತರೂ ಹಿತಚಿಂತಕರೂ, ತಾವಲ್ಲದೆ ಬೇರೆ ಇನ್ನಾರಿದ್ದಾರೆ. ಕನ್ಯಾದಾನ ಮಾಡಿ ವಂಶೋದ್ಧಾರ ಮಾಡತಕ್ಕ ಪುಣ್ಯಕಾರ್ಯವನ್ನೂ ವಿಂಧ್ಯವಾಸಿನೀ ಶ್ರೀ ಗಿರಿಜಾಂಬೆಯು ತಮ್ಮಲ್ಲಿ ಪ್ರೇರಣೆಮಾಡಿರುವುದು ನಮ್ಮ ಸುಕೃತೋದಯವೆಂದೇ ಭಾವಿಸಿದ್ದೇವೆ. ತಾವು ಮಾಡುವ ಸಕಲ ಸತ್ಕಾರಗಳನ್ನೂ ಪರಮಾದರದಿಂದ ಕೈಕೊಂಡು, ಕೃತಜ್ಞತೆಯಿಂದ ನಡೆದುಕೊಳ್ಳಲು ಸಿದ್ಧರಾಗಿದ್ದೇವೆ. ತಮಗೆ ಸಂತೋಷ ತೋರಿದಂತೆ ಮಾಡಲು ಮಹಾರಾಣಿಯವರು ಸ್ವತಂತ್ರರಾಗಿದ್ದೀರಿ" ಎಂದು ಬಿನ್ನವಿಸಿ, ವೀಳಯವನ್ನು ತೆಗೆದುಕೊಂಡು ರಾಜಮಂದಿರದಿಂದ ಹೊರಟರು.

ಮಾರನೆಯ ಪ್ರಾತಃಕಾಲವೇ ಲೇಶವೂ ಸಾವಕಾಶವಿಲ್ಲದೆ ಕುಲಪುರೋಹಿತರು ಬಂದು ಕನ್ಯಾವರರ ಚಂದ್ರತಾರಾ ಬಲಗಳನ್ನು ಗುಣಿಸಿ ನೋಡಿದರು; ಸಕಲ ಶುಭಗ್ರಹಗಳೂ ಉಚ್ಚಸ್ಥಾನವನ್ನು ಅಲಂಕರಿಸಿದ್ದ ದಿವ್ಯ ಮುಹೂರ್ತವೊಂದನ್ನು ನಿಶ್ಚಯಿಸಿ ಕರಣಿಕರುಗಳಿಂದ ಲಗ್ನಪತ್ರಿಕೆಗಳನ್ನು ಬರೆಯಿಸಿದರು; ಆ ಶುಭ ಪತ್ರಿಕೆಗಳನ್ನು ಮಂಗಳ ದ್ರವ್ಯಾದಿಗಳಿಂದ ಪೂಜಿಸಿ ಹತ್ತಿರದ ದೂರದ ಆಪ್ತೇಷ್ಟರಿಗೂ ಅರಮನೆಯ ಮುಖ್ಯ ಮುಖ್ಯ ನೌಕರರಿಗೂ ಪಟ್ಟಣದಲ್ಲಿಯ ಶೆಟ್ಟಿ ಯಜಮಾನರೇ ಮುಂತಾದ ಪ್ರಜಾಪ್ರಮುಖರಿಗೂ ಕಳುಹಿಸಲು ತಕ್ಕ ಏರ್ಪಾಡುಗಳನ್ನು ಮಾಡಿದರು; ಸಕಲ ವಸ್ತುಸಾಮಗ್ರಿಗಳೂ ಅಣಿಗೊಳಿಸಲ್ಪಟ್ಟವು. ನಗರದ ಕೋಟೆ ಪೇಟೆಗಳೂ ರಾಜಬೀದಿಗಳೂ ಮಹಾದ್ವಾರಗಳೂ ತಳಿರುತೋರಣ ಪತಾಕೆಗಳಿಂದ ಸಿಂಗರಿಸಲ್ಪಟ್ಟುವು. ಊರಿನ ಪ್ರತಿಯೊಂದು ಮನೆಯವರೂ ಅದು ತಮ್ಮ ಮನೆಯ ಲಗ್ನಕಾರ್ಯವೋ ಎಂಬಷ್ಟು ಶ್ರದ್ಧೆ ಉತ್ಸಾಹಗಳಿಂದ ಮನೆಗಳನ್ನು ಸುಣ್ಣಕಾರಣೆ ತಳಿರುತೋರಣಗಳಿಂದ ಸಿಂಗರಿಸಿ, ನೇತ್ರಾನಂದಕರವಾಗಿರುವಂತೆ ಮಾಡಿದರು. ಬಹು ಶೀಘ್ರಕಾಲದಲ್ಲಿಯೇ ಆ ರಾಜಧಾನಿಯು ದಿವ್ಯವಾಗಿ ಅಲಂಕರಿಸಲ್ಪಟ್ಟು ವಿವಾಹ ಮಹೋತ್ಸವಕ್ಕೆ ಸಿದ್ಧವಾಯಿತು.

ವಿವಾಹ ಮುಹೂರ್ತದ ಶುಭ ದಿನವು ಸಮೀಪಿಸುತ್ತಿರಲು ನಗರವು ಓಲಗ ತಾಳಮೇಳವೇ ಮುಂತಾದ ಮಂಗಳ ವಾದ್ಯಧ್ವನಿಯಿಂದ ತುಂಬಿ ಸಕಲ ದಿಕ್ಕುಗಳಿಂದಲೂ ಜನಸಮೂಹವನ್ನು ಆಕರ್ಷಿಸಿತು. ಗೋಧೂಳೀ

ಲಗ್ನದಲ್ಲಿ ವರಶ್ರೇಷ್ಠ ಶ್ರೀ ಯದುರಾಯರನ್ನು ಎದುರುಗೊಂಡು ಕರೆದೊಯ್ದು ಭವ್ಯವಾಗಿ ಸಿಂಗರಿಸಲ್ಪಟ್ಟಿದ್ದ ಅರಮನೆಯ ದಿವ್ಯಮಹಲಿನಲ್ಲಿಳಿಸಿ ರಾಜೋಪಚಾರಗಳಿಂದ ಸತ್ಕರಿಸಿದರು. ಮಾರನೆಯ ಪ್ರಾತಃಕಾಲ ಅವರಿಗೆ ಶಾಸ್ತ್ರೋಕ್ತವಾಗಿ ನಡೆಯಬೇಕಾದ ಎಣ್ಣೆಶಾಸ್ತ್ರವಾಗಿ ದಿವ್ಯ ಪರಿಮಳೋದಕದಿಂದ ಮಂಗಳ ಸ್ನಾನವಾಯಿತು. ತರುವಾಯ ಪೂರ್ವಭಾವಿಯಾಗಿ ನಡೆಯಬೇಕಾದ ವಿವಾಹಾಂಗವಾದ ನಾಂದೀಸ್ಥಾಪನೆಯೇ ಮುಂತಾದ ಸಕಲ ವಿಧ್ಯುಕ್ತ ಕರ್ಮಗಳೂ ನೆರವೇರಿ ಕನ್ಯಾದಾನದ ವೇಳೆಯು ಸಿದ್ಧವಾಗಿರಲು, ಶ್ರೀ ಯದುರಾಯರು ರಾಜೋಚಿತವಾದ ಪೀತಾಂಬರಗಳನ್ನೂ ನವರತ್ನಖಚಿತ ದಿವ್ಯ ಆಭರಣಗಳನ್ನೂ ಧರಿಸಿ ಹಸೆಜಗುಲಿಗೆ ದಯಮಾಡಿಸಿದರು. ಭೂಸುರರ ವೇದೋಕ್ತ ಮಂತ್ರಗಳಿಂದ ಅಲ್ಲಿಯ ವಾತಾವರಣವೆಲ್ಲ ಶಾಂತಮಯವಾಗಿ ಸೌಭಾಗ್ಯದಾಯಕವಾಗಿ ಶುಭಕರವಾಗಿ ಒಪ್ಪುತ್ತಿದ್ದಿತು.

ಅತ್ತ, ಕನ್ಯಾಮಣಿ ಚಿಕ್ಕದೇವರಸಿಗೂ ಅವ್ವೆಯರು ಮಂಗಳಸ್ನಾನ ಮಾಡಿಸಿ ದಿವ್ಯ ವಸ್ತ್ರಾಭರಣಗಳಿಂದ ಸಿಂಗರಿಸುತ್ತಿದ್ದರು. ರಾಜಕುಮಾರಿಯು ಸೌಂದರ್ಯ ಸೌಕುಮಾರ್ಯಗಳಿಂದ ಕಾಮನರಸಿ ರತಿದೇವಿಯನ್ನೂ ಮರೆಯಿಸುವಂತಿರಲು ಆಕೆಯನ್ನು ಒಡವೆಗಳಿಂದ ಸಿಂಗರಿಸಿ ಸೌಂದರ್ಯವನ್ನು ಹೆಚ್ಚಿಸಲೆಳಸುವುದು ಹುಚ್ಚುತನವೆಂದು ಆ ಸಖಿಯರು ಭಾವಿಸಿದರು. ಒಡವೆಗಳಿಂದ ಆಕೆಯ ಅಂಗಾಂಗಗಳಿಗೆ ಕಳೆಯುಂಟಾಗುವುದರ ಬದಲು, ಆಕೆಯ ಮನಮೋಹಕ ಅಂಗಾಂಗಗಳೇ ತಮ್ಮ ಪ್ರಭೆಯಿಂದ ಒಡವೆಗಳ ಸೌಂದರ್ಯವನ್ನು ಹೆಚ್ಚಿಸುವಂತಿದ್ದುವು.

ಸಮವಯಸ್ಕರಾದ ಸಖಿಯರಿಂದ ಕೂಡಿದ ರಾಜಪುತ್ರಿಯನ್ನು ದಾದಿಯರು ಪರಾಕು ಹೇಳುತ್ತ ಕರೆತಂದು ತೆರೆಯ ಮತ್ತೊಂದು ಪಾರ್ಶ್ವದಲ್ಲಿ ವರನ ಎದುರಿನ ಹಸೆಮಣೆಯ ಮೇಲೆ ನಿಲ್ಲಿಸಿದರು. ಒಂದು ಕಡೆಯಲ್ಲಿ ವೇದವಿದರಾದ ಬ್ರಾಹ್ಮಣರು ಪವಿತ್ರ ವೇದಮಂತ್ರಗಳನ್ನು ಉಚ್ಚರಿಸುತ್ತಿರಲು, ಬೇರೊಂದೆಡೆಯಲ್ಲಿ ಸುವಾಸಿನಿಯರು ದಿವ್ಯ ಮಂಜುಳ ಸುಸ್ವರದಿಂದ ಹಸೆಗೆ ಕರೆವ–ಆರತಿಯ ಮುಂತಾದ ಹಾಡುಗಳನ್ನು ಹೇಳುತ್ತಿದ್ದರು. ಒಂದೆಡೆಯಲ್ಲಿ ಸಂಗೀತ ವಿದ್ವಾಂಸರು ಶ್ರುತಿ ತಾಳ ಲಯಬದ್ಧವಾಗಿ ಕರ್ಣಾಪ್ಯಾಯನವಾದ ಸಂಗೀತವನ್ನು ಪಾಡುತ್ತಿದ್ದರೆ ಬೇರೊಂದೆಡೆಯಲ್ಲಿ ಓಲಗ ತಾಳಮೇಳಗಳು

ಮನೋಹಾರಕವಾಗಿದ್ದುವು. ಹೀಗೆ ಆ ಮದುವೆಯ ಸಂಭ್ರಮವು ಅಲ್ಲಿ ನೆರೆದ ಸಮಸ್ತರಿಗೂ ನೇತ್ರೇಂದ್ರಿಯ ಶ್ರೋತ್ರೇಂದ್ರಿಯ ಸುಖಸಂತೋಷ ಗಳನ್ನು ಒದಗಿಸಿ ಆದರಿಸುವಂತಿದ್ದಿತು.

ಕನ್ಯೆಯು ಪಿತೃವಿಹೀನಳಾಗಿದ್ದುದರಿಂದ ಕನ್ಯಾದಾನಮಾಡಿ ಕೊಡುವ ಕಾರ್ಯವನ್ನು ಮಹಾರಾಣಿಯವರು ಶ್ರೀ ಚಾಮರಾಜರ ಜ್ಞಾತಿಯಾದ ನಂಜುಂಡರಾಜೇ ಅರಸು ಎಂಬಾತನಿಗೆ ವಹಿಸಿದ್ದರು. ಆತನು ಕನ್ಯೆಯನ್ನು ವರನ ಎದುರಿನಲ್ಲಿ ನಿಲ್ಲಿಸಿಕೊಂಡು ವಿಧ್ಯುಕ್ತರೀತಿಯಿಂದ ವಿವಾಹ ಮಂಗಳ ಕಾರ್ಯವನ್ನು ನೆರವೇರಿಸಲು ಸಿದ್ಧನಾದನು. ಪುರೋಹಿತನು ವಧೂವರರ ಕೈಗಳಲ್ಲಿ ಗುಡಜೀರಿಗೆಗಳನ್ನಿತ್ತು ಉಭಯರನ್ನೂ ಅಕ್ಕಿಯ ಗೂಡೆಗಳಲ್ಲಿ ನಿಲ್ಲಿಸಿ ವಿವಾಹಾಂಗ ಕಾರ್ಯಗಳನ್ನು ನಡೆಯಿಸತೊಡಗಿದನು. ನಂಜುಂಡರಸನು ಕನ್ಯೆಯನ್ನು ಹೋಮಾಗ್ನಿಯ ಮುಂದೆ ನಿಲ್ಲಿಸಿಕೊಂಡು – ಆತ್ರೇಯಸ ಗೋತ್ರೋದ್ಭವರೂ ಯದುವಂಶ ಸಂಭೂತ ಶ್ರೀ ರಾಜದೇವ ಭೂವರೇಣ್ಯನ ತನುಸಂಜಾತರೂ ಲಕ್ಷ್ಮೀನಾರಾಯಣ ಸ್ವರೂಪರೂ ಆದ ವರಶ್ರೇಷ್ಠ ಶ್ರೀ ಯದುರಾಯರ ಹಸ್ತಗಳಲ್ಲಿ, ಗೌತಮ ಗೋತ್ರೋದ್ಭವರೂ ಭೋಜವಂಶ ಸಂಭೂತಳೂ, ಶ್ರೀ ಶೂರದೇವ ನೃಪಾಲ ಪರಂಪರಾವಿರ್ಭೂತ ಶ್ರೀ ಚಾಮ ರಾಜೇಂದ್ರರ ತನುಸಂಜಾತೆ ಶ್ರೀ ಲಕ್ಷ್ಮೀಸ್ವರೂಪಳಾದ ಕನ್ಯಾಶಿರೋಮಣಿ ಶ್ರೀ ಚಿಕ್ಕದೇವೀರಮ್ಮಣ್ಣಿಯ ಹಸ್ತಗಳನ್ನು ದಿವ್ಯ ನಾರಿಕೇಳ ಫಲದೊಂದಿಗೆ ಇರಿಸಿ, ಯಜ್ಞೇಶ್ವರ ಸಾಕ್ಷಿಯಾಗಿ ಧಾರೋದಕವನ್ನು ಬಿಡುತ್ತಿರಲು, ಕನ್ಯಾ ಪ್ರದಾನ ಮಾಡಿದನು. ವರನು ಕನ್ಯೆಯ ಕಂಠಪ್ರದೇಶದಲ್ಲಿ ಮಾಂಗಲ್ಯ ಬಂಧನಮಾಡಿದುದನ್ನು ವೃದ್ಧ ಸುಮಂಗಲೆಯರೈದು ಮಂದಿ ಸೇಸೆಗಳನ್ನಿಟ್ಟು ಆಶೀರ್ವದಿಸಿದರು.

ನಂಜುಂಡರಾಜೇ ಅರಸನು ಆ ಸಂದರ್ಭದಲ್ಲಿ ಶ್ರೀ ಯದುಮಹಾ ರಾಯರನ್ನು ಕುರಿತು, "ರಾಜೇಂದ್ರರೇ! ಈ ಕನ್ಯೆಯು ಇನ್ನುಮೇಲೆ ನಿಮ್ಮ ಸಹಧರ್ಮಿಣಿಯಾಗಿರತಕ್ಕವಳು. ಈಕೆಯನ್ನು ಪರಿಗ್ರಹಿಸಿ ನೀವು ಧರ್ಮಾರ್ಥ ಕಾಮಗಳಲ್ಲಿ ಈಕೆಯೊಂದಿಗೆ ಸಕಲ ಶುಭಸಂಪತ್ತುಗಳನ್ನೂ ಅನುಭವಿಸುತ್ತ ಆಚಂದ್ರಾರ್ಕ ಯಶೋವಂತರಾಗಿರಿ" ಎಂದು ಆಶೀರ್ವದಿಸಿದನು. ಧರ್ಮ ಮಾರ್ಗೈಕ ತತ್ಪರರಾದ ಶ್ರೀ ಯದುರಾಯರೂ ಸಹ ವೇದೋಕ್ತಮಂತ್ರಗಳನ್ನು

ಅನುಸರಿಸಿ, — "ಸಹಧರ್ಮಚಾರಿಣಿಯಾದ ಈ ಸತೀಮಣಿಯೊಂದಿಗೆ ನಾನು, 'ಧರ್ಮೇಚ ಅರ್ಥೇಚ ಕಾಮೇಚ' ಅತಿಕ್ರಮಿಸದೆ ಗೃಹಸ್ಥಧರ್ಮ ಯಾತ್ರೆಯನ್ನು ನಡೆಯಿಸುವೆನು" ಎಂದು ವಾಗ್ದಾನಮಾಡಿದರು. ಆ ಶುಭ ಮುಹೂರ್ತದಲ್ಲಿ ದಿಕ್ಕುಗಳನ್ನು ಕಿವುಡಾಗಿಸುವಂತೆ ಮಂಗಳವಾದ್ಯಗಳು ಭೋರ್ಗರೆದುವು. ಯುಕ್ತಸಮಯಗಳಲ್ಲಿ ಪುರೋಹಿತರು ಶುಭಕರವಾದ ಮಹಾಸಂಕಲ್ಪ ಮಂಗಳಾಷ್ಟಕಗಳನ್ನು ಹೇಳಿದರು. ಮುತ್ತೈದೆಯರು, ದಿವ್ಯ ಮಂಜುಳ ಸುಸ್ವರಗಳಿಂದ ಆಶೀರ್ವಚನಗಳನ್ನು ಪಾಡಿದರು. ನೆರೆದ ಸಮಸ್ತರಿಗೂ ಗಂಧಪುಷ್ಪ ತಾಂಬೂಲ ದಕ್ಷಿಣೆ ಫಲಾದಿಗಳು ವಿನಿಯೋಗಿಸಲ್ಪಟ್ಟುವು. ಆ ಸಂದರ್ಭದಲ್ಲಿ ಕನ್ಯಾದಾನದೊಂದಿಗೆ ನಡೆಯಬೇಕಾದ ಸಕಲ ವಿಧ ದಾನಗಳನ್ನೂ ಮಹಾರಾಣಿಯವರು ಸದಕ್ಷಿಣಾಕವಾಗಿ ಕೊಡಿಸಿದರು. ಉಡುಗೊರೆ ಉತ್ಸವಾದಿಗಳೂ ಧಾರಾಳವಾಗಿ ನಡೆದುವೆಂದು ಹೇಳಬೇಕಾದುದೇನು!

ಲಕ್ಷ್ಮೀನಾರಾಯಣರಂತೆ ಮಂಗಳಾಕಾರರಾಗಿ, ರತಿಮನ್ಮಥರಂತೆ ದಿವ್ಯ ಸುರೂಪ ಶೋಭಿತರಾದ ಆ ಮಗಳು ಅಳಿಯಂದಿರು, ಮುಂದಲೆಗೆ ಬಾಸಿಂಗಗಳನ್ನೂ ಕೈಗಳಿಗೆ ಕಂಕಣಗಳನ್ನೂ ಕಟ್ಟಿಕೊಂಡು, ದಿವ್ಯ ವಸ್ತ್ರಭೂಷಣಗಳನ್ನು ಧರಿಸಿ, ಕೈ ಹಿಡಿದುಕೊಂಡು ಬಂದು ಮಹಾಮಾತೃಶ್ರೀ ದೇವಾಜಮ್ಮಣ್ಣಿಯವರ ಪಾದಗಳಿಗೆ ನಮಸ್ಕರಿಸಿದರು. ಆ ಮದುಮಕ್ಕಳನ್ನು ಕಂಡ ರಾಜಪತ್ನಿಯ ಕಣ್ಣುಗಳೆರಡೂ ಹರ್ಷಜಲದಿಂದ ತುಂಬಿಹೋದುವು. ತಮಗೆ ಬಂದು ಒದಗಿದ್ದ ಆ ದುಸ್ಥಿತಿಯಲ್ಲಿ, ಮಗಳಿಗೆ ಉತ್ತಮ ರಾಜವಂಶೋತ್ಪನ್ನನಾದ ವರನು ದೊರೆತು ಶಾಸ್ತ್ರೋಕ್ತ ರೀತಿಯಲ್ಲಿ ಮದುವೆಯಾದುದು ಆಕೆಗೆ ಮಹದಾನಂದವನ್ನುಂಟುಮಾಡಿತು. ಮದುಮಕ್ಕಳ ಅನುರೂಪ ದಾಂಪತ್ಯವನ್ನು ಸಕಲರೂ ಮೆಚ್ಚಿಕೊಂಡರು. ದೇವಾಜಮ್ಮಣ್ಣಿಯವರಿಗಾದರೋ ತಮ್ಮ ಆ ಮಗಳು ಅಳಿಯಂದಿರ ರೂಪ ಸಂಪತ್ತನ್ನು ಎಷ್ಟು ನೋಡಿದರೂ ಮನಸ್ಸಿಗೆ ತಣಿವು ಉಂಟಾಗದು; ತಮ್ಮ ಆ ಹಿರಿದಾಸೆಯಿಂದ ಮದುಮಕ್ಕಳಿಗೆ ದೃಷ್ಟಿ ದೋಷ ಉಂಟಾದೀತೆಂದು ಬೆದರಿ, ಮುತ್ತೈದೆಯರಿಂದ ಆರತಿಗಳನ್ನೆತ್ತಿಸಿ ರಕ್ಷೆಗಳನ್ನಿಡಿಸಿದರು; ಇಡಿಗಾಯಿಗಳನ್ನು ಒಡೆಯಿಸಿದರು. ತಮ್ಮ ಮುದ್ದು ಮಗಳು, ಶಂಕರನೊಂದಿಗೆ ಪಾರ್ವತಿಯೂ, ಬ್ರಹ್ಮನೊಂದಿಗೆ ಸರಸ್ವತಿಯೂ, ಶ್ರೀಮನ್ನಾರಾಯಣನೊಂದಿಗೆ ರಮಾದೇವಿಯೂ, ತ್ರಿಲೋಕ ಪೂಜ್ಯರಾಗಿ

ಇರುತ್ತಿರುವಂತೆ ಪ್ರಜಾ ಪರಿವಾರ ರಂಜಕರಾಗಿ, ಪುತ್ರಪೌತ್ರ ಸೌಭಾಗ್ಯ ಸಂಪನ್ನರಾಗಿ, ಚಿರಕಾಲ ಸಂಸಾರಮಾಡಿಕೊಂಡಿರುವಂತೆ ಅನುಗ್ರಹಿಸೆಂದು ಮಾತಾ ಚಾಮುಂಡಾಂಬಿಕೆಯನ್ನು ಪ್ರಾರ್ಥಿಸಿಕೊಂಡರು.

ವಿವಾಹ ಮಂಗಳಕಾರ್ಯದ ಸಂಬಂಧದಲ್ಲಿ ಭೂಸುರ ವರ್ಗಕ್ಕೂ ಇತರ ಸಕಲ ವರ್ಣಗಳವರಿಗೂ, ಭಕ್ಷ್ಯಭೋಜ್ಯಯುಕ್ತವಾದ ದಿವ್ಯ ಆರೋಗಣೆಗಳು ನಾಲ್ಕಾರು ದಿನಗಳು ನಡೆದವು. ಸಕಲರೂ ಸಂತುಷ್ಟರಾದರು. ಕೊನೆಯಲ್ಲಿ ಅಗಾಧ ವೈಭವದಿಂದ ಮೆರವಣಿಗೆಯೂ ನಡೆದು, ರಾಜಧಾನಿಯ ಸಕಲ ಜನರ ಕಣ್ಮನಗಳಿಗೂ ಆ ದಿವ್ಯನೋಟವು ಪರಮಾನಂದವನ್ನುಂಟುಮಾಡಿತು.

ದೇವಾಜಮ್ಮಣ್ಣಿಯವರು ತಾವು ನುಡಿದಿದ್ದ ಮಾತನ್ನು ಸಾರ್ಥಕಗೊಳಿಸಲು, ವಿವಾಹ ಮಹೋತ್ಸವವು ನೆರವೇರಿದ ಸ್ವಲ್ಪ ದಿನಗಳೊಳಗಾಗಿಯೇ ಪಟ್ಟಾಭಿಷೇಕ ಮಹೋತ್ಸವಕ್ಕೂ ಸುದಿನವನ್ನು ನೋಡಿಸಿ ನಿಶ್ಚಯಿಸಿದರು. ಆ ದಿನ ಯದುರಾಯರನ್ನೂ ಶ್ರೀ ಚಿಕ್ಕದೇವರಸಿಯನ್ನೂ ತಮ್ಮ ವಂಶಕ್ಕೆ ಕುಲಕ್ರಮಾಗತವಾಗಿ ಬಂದ ಉಜ್ವಲ ಸಿಂಹಪೀಠದ ಮೇಲೆ ಕೂರಿಸಿ, ಮುದ್ರೆಯುಂಗುರವನ್ನೊಪ್ಪಿಸಿ, ಶಾಸ್ತ್ರೋಕ್ತವಾಗಿ ಪಟ್ಟಾಭಿಷೇಕ ಮಾಡಿಸಿದರು. ಆ ಮಂಗಳಕಾರ್ಯವು ಶಾಲಿವಾಹನ ಶಕ ೧೩೨೧ (ಕ್ರಿ. ಶ. ೧೩೯೯) ನೆಯ ಪ್ರಮಾಥಿ ಸಂವತ್ಸರದ ವೈಶಾಖ ಶುದ್ಧ ಪಂಚಮಿಯ ಶುಭ ಮುಹೂರ್ತದಲ್ಲಿ ನಡೆಯಿತು. ಅಂದಿನಿಂದ ಶ್ರೀ ಯದುರಾಯರು ಮೈಸೂರು ರಾಜವಂಶದ ಮೂಲ ಪುರುಷರೂ ಈ ಸಂಸ್ಥಾನದ ಪ್ರಭುವರ್ಯರೂ ಆಗಿ ಪ್ರಜೆ ಪರಿವಾರಗಳನ್ನು ಧರ್ಮದಿಂದ ಪಾಲಿಸತೊಡಗಿದರು.

ಧೀರರೂ ಸತ್ಯಧರ್ಮಗಳಲ್ಲಿ ಶ್ರದ್ಧಾಭಕ್ತಿಯುಳ್ಳವರೂ ಆದ ಶ್ರೀ ಯದುರಾಯರನ್ನು ಪ್ರಭುವನ್ನಾಗಿ ಪಡೆದು ಮೈಸೂರು ಜನತತಿಯು ಜಯ ಜಯವೆಂದು ನಲಿದಾಡಿತು. ಪಟ್ಟಾಭಿಷಿಕ್ತರಾದ ಸುಸಂದರ್ಭದಲ್ಲಿ ಆ ರಾಜವರೇಣ್ಯರು, "ನಾವು ದುಷ್ಟಶಿಕ್ಷಣೆ ಶಿಷ್ಟರಕ್ಷಣೆಗಳನ್ನು ಮಾಡುತ್ತ, ಪ್ರಜೆಗಳ ಶ್ರೇಯೋಭಿವೃದ್ಧಿಗಾಗಿಯೇ ಶ್ರಮಿಸುವೆವು. ಸತ್ಯಧರ್ಮಗಳನ್ನು ಸರ್ವ ವಿಧದಿಂದಲೂ ರಕ್ಷಿಸುವೆವು. ಪ್ರಜಾವರ್ಗದ ಕ್ಷೇಮಚಿಂತನೆಯನ್ನೇ ಭಗವತೀ ಶ್ರೀ ಚಾಮುಂಡಾಂಬಿಕೆಯ ಸೇವೆಯೆಂದು ಭಾವಿಸುವೆವು" ಎಂಬ ಮಹತ್ವದ ರಾಜಸಂದೇಶವನ್ನು ದಯಪಾಲಿಸಿ ಅಭಯಪ್ರದಾನ ಮಾಡಿದರು.

ರಾಜ್ಯಾಭಿಷೇಕದ ಕಾರ್ಯಕಲಾಪಗಳೆಲ್ಲವೂ ಮುಗಿದ ತರುವಾಯ ಮಹಾರಾಜಾ ಶ್ರೀ ಯದುರಾಯರು ಒಂದು ದಿನ, ತಾವು ಕೇವಲ ಪರಕೀಯರಾಗಿ ಮೈಸೂರಿಗೆ ಬಂದ ತರುಣದಲ್ಲಿ ತಮಗೆ ಬಹು ಬಗೆಯಿಂದ ಉಪಕಾರ ಮಾಡಿದ ಕರಣಿಕ ತಿಮ್ಮರಸ, ನಾರಣಯ್ಯ, – ಇವರನ್ನು ಮರೆಯದೆ ಕರೆಯಿಸಿಕೊಂಡು, "ಮಹನೀಯರೇ ! ನಿಮ್ಮಿಂದ ನಾವು ವಿಶೇಷ ಉಪಕಾರ ಹೊಂದಿದ್ದೇವೆ; ನಿಮ್ಮ ಇಷ್ಟಾರ್ಥವೇನಿದೆ? ತಿಳಿಸಿದಲ್ಲಿ ಸಲ್ಲಿಸಿ ಕೃತಾರ್ಥರಾಗುವೆವು" ಎಂದರು. ಆಗ ಆ ಕರಣಿಕರು "ಮಹಾಸ್ವಾಮಿ! ರಾಜಾಸ್ಥಾನದ ಗಾಯಸ ವೃತ್ತಿಯನ್ನು ನಮ್ಮ ಮನೆತನಕ್ಕೆ ಕೊಡಿಸುವ ಕೃಪೆಮಾಡಿ ಕಾಪಾಡಬೇಕು" ಎಂದು ಪ್ರಾರ್ಥಿಸಿ, ಅದನ್ನು ಪಡೆದರು. ಅದರಂತೆಯೇ ಜಂಗಮಾರ್ಯನನ್ನೂ ಕರೆಯಿಸಿ ಪ್ರಶ್ನೆಮಾಡಲು; ಆತನು, "ಮಹಾಸ್ವಾಮಿ ! ನಾನು ವಿರಕ್ತನು; ನನಗೆ ಯಾವ ಧನಕನಕಾದಿ ಸೌಭಾಗ್ಯಗಳಿಂದಲೂ ಏನೂ ಆಗಬೇಕಾದುದಿಲ್ಲ; ನಮ್ಮ ಕಾಷಾಯವಸ್ತ್ರವು (ಕಾವೀ ಬಟ್ಟೆ) ತಮ್ಮ ಧ್ವಜಪಟದೊಂದಿಗೆ ಆಡುವಂತಾಗಬೇಕು; ಮಹಾರಾಜರು ತಮ್ಮ ನಾಮಧೇಯದೊಡನೆ 'ಒಡೆಯರು' ಎಂಬ ಪದವನ್ನು ವಂಶಪಾರಂಪರ್ಯವಾಗಿ ನಮ್ಮ ಗುರುತಾಗಿ ಧರಿಸಿರಬೇಕು; ಈ ಎರಡೇ ನನಗಿರುವ ಅಪೇಕ್ಷೆ" ಎಂದನು. ರಾಜ್ಯಾಂಗಕ್ಕೆ ಸಂಬಂಧಿಸಿದ ಆ ವಿಚಾರಗಳನ್ನು ಯದುರಾಯರು ಮಹಾರಾಣಿಯವರಲ್ಲಿ ವಿಜ್ಞಾಪಿಸಿ, ಅವರ ಅನುಮತಿಯನ್ನು ಪಡೆದು ಜಂಗಮಾರ್ಯನ ಆ ಇಷ್ಟಾರ್ಥವನ್ನೂ ಸಲ್ಲಿಸಿದರು.

ತರುವಾಯ ಯದುರಾಯರು ಸಾವಕಾಶಮಾಡದೆ, ತಮ್ಮೊಂದಿಗೆ ರಾಜ್ಯ ಪ್ರಾಪ್ತಿಗಾಗಿ ಶ್ರಮಿಸಿದ ತಮ್ಮ ತಮ್ಮಂದಿರು ಕೃಷ್ಣರಾಯರಿಗೆ ಉತ್ತಮ ವಂಶೋತ್ಪನ್ನಳಾದ ಅನುರೂಪ ಕನ್ಯೆಯನ್ನು ನೋಡಿ, ಮಹಾ ವೈಭವದಿಂದ ಮದುವೆ ಮಾಡಿದರು. ಅಲ್ಲದೆ ಕಾರುಗಹಳ್ಳಿಯ ಧೊರೆತನವನ್ನೂ ಅವರಿಗೆ ವಹಿಸಿ ಅಲ್ಲಿ ಪಟ್ಟಾಭಿಷೇಕ ಮಾಡಿದರು. ಹೀಗೆ ಕಾರುಗಹಳ್ಳಿಯಲ್ಲಿ ಕೃಷ್ಣರಾಯರೂ, ಮೈಸೂರಿನಲ್ಲಿ ಯದುರಾಯರೂ, ತಮ್ಮ ತಮ್ಮ ಪತ್ನೀಪರಿವಾರ ಸಮೇತರಾಗಿ ಧರ್ಮದಿಂದ ರಾಜ್ಯಭಾರ ಮಾಡುತ್ತ ಕೆಲವು ಕಾಲ ಸುಖ ಸಂತೋಷಗಳನ್ನು ಅನುಭವಿಸುತ್ತಿದ್ದರು.

ಹೀಗಿರುತ್ತಿರುವಲ್ಲಿ ಒಂದಾನೊಂದು ದಿನ ಯದುರಾಯರು ತಾವು ದ್ವಾರಕಾ ನಗರಿಯಿಂದ ಬಂದಾಗ ಪ್ರಾರಂಭದಲ್ಲಿ ತಂಗಿದ್ದು ದೇವತಾ ದರ್ಶನ ಮಾಡಿದ ಯದುಗಿರಿಯನ್ನು ಜ್ಞಾಪಿಸಿಕೊಂಡು ಪತ್ನೀಪರಿವಾರಗಳೊಂದಿಗೆ ಅಲ್ಲಿಗೆ ಪ್ರಯಾಣಮಾಡಿ ಸ್ವಾಮಿ ದರ್ಶನಮಾಡಿ ಸಕಲ ವಿಧ ಸೇವೆಗಳನ್ನೂ ಸಲ್ಲಿಸಿದರು. ಆ ಗಿರಿಗೆ ಒಂದು ಭವ್ಯವಾದ ಕೋಟೆಯನ್ನು ಕಟ್ಟಿಸಿ ಅದನ್ನು ಮುಂದೆ ಮೇಲುಕೋಟೆ ಎಂದು ಕರೆಯತಕ್ಕದ್ದೆಂದು ಅಪ್ಪಣೆ ಮಾಡಿದರು.

ಚಿಕ್ಕದೇವೀರಮ್ಮಣ್ಣಿಯು ಗೃಹಿಣೀಧರ್ಮದಲ್ಲಿ ಪತಿಯೊಂದಿಗೆ ಸುಖ ದಿಂದ ನಾಲ್ಕಾರು ವರ್ಷಗಳು ಸಂಸಾರ ಮಾಡಿಕೊಂಡಿದ್ದಳು. ಆದರೂ ಆವರೆಗೆ ಆಕೆಯಲ್ಲಿ ವಂಶಾಭಿವೃದ್ಧಿ ಸೂಚಕವಾದ ಸಂತಾನಾಂಕುರವು ತಲೆದೋರಲಿಲ್ಲ. ಇದು ವೃದ್ಧ ರಾಜಪತ್ನಿ ದೇವಾಜಮ್ಮಣ್ಣಿಯವರಿಗೆ ಅತಿಶಯ ಚಿಂತೆಯನ್ನುಂಟುಮಾಡಲು ಕಾರಣವಾಯಿತು. ಆಗ ಅವರು ಕುಲದೇವತೆ ಚಾಮುಂಡಾಂಬಿಕೆಗೆ ವಿಶೇಷ ಹರಕೆಗಳನ್ನು ಮಾಡಿಕೊಂಡು ರಾಜದಂಪತಿ ಗಳಿಗೆ ಪುತ್ರಸಂತಾನವನ್ನು ಅನುಗ್ರಹಿಸಿದಲ್ಲಿ, ದೇವಾಲಯದ ಬಳಿಯಿರುವ ಸಂಪಿಗೆಯ ವೃಕ್ಷಕ್ಕೆ ಬಂಗಾರದ ತೊಟ್ಟಿಲನ್ನು ಕಟ್ಟಿಸಿ ದೇವಿಯ ಸಾನ್ನಿಧ್ಯ ದಲ್ಲೇ ಮಗುವಿಗೆ ನಾಮಕರಣ ಮಾಡಿಸುವೆವೆಂದು ಪ್ರಾರ್ಥಿಸಿಕೊಂಡರು.

ಮೈಸೂರು ರಾಜವಂಶವನ್ನು ಉದ್ಧರಿಸುವುದಕ್ಕಾಗಿಯೇ ಬಹು ದೂರ ದೇಶದಿಂದ ರಾಜಕುಮಾರರನ್ನು ಪ್ರೇರಿಸಿ ಕರೆತಂದ ದೇವಿಗೆ ಆ ವಂಶೋದ್ಧಾರ ಕ್ಕಾಗಿ ಪುತ್ರನನ್ನು ಕರುಣಿಸುವ ಕಾರ್ಯವು ಅಸಾಧ್ಯವೆನ್ನಿಸೀತೆ? ಮುಂದೆ ಒಂದು ವರ್ಷ ಕಾಲದೊಳಗಾಗಿ ಮಹಾರಾಜ ಭಾರ್ಯೆಯು ಗರ್ಭಿಣಿಯಾಗಿ ಪುತ್ರರತ್ನವನ್ನು ಪ್ರಸವಿಸಿದಳು. ಆ ಸಂತೋಷಕ್ಕಾಗಿ ಬಂಡಿ ಬಂಡಿಗಳಲ್ಲಿ ಸಕ್ಕರೆಯನ್ನು ಹಂಚಿಸಿ ರಾಜಪುತ್ರನ ಜನನವನ್ನು ಪ್ರಕಟಿಸಿದರು.

ರಾಜದಂಪತಿಗಳು ಚಾಮುಂಡಾಂಬಿಕೆಯ ದೇವಾಲಯದ ಬಳಿಯ ಚಂಪಕ ವೃಕ್ಷಕ್ಕೆ ಮಣಿಮಯ ತೊಟ್ಟಿಲನ್ನು ಕಟ್ಟಿಸಿ, ತಮ್ಮ ಶಿಶುವಿಗೆ ಹಿರಿಯ ಬೆಟ್ಟದ ಚಾಮರಾಜ ಒಡೆಯರು ಎಂದು ನಾಮಕರಣ ಮಾಡಿದರು. ಸಕಲವಿಧ ಮಹೋತ್ಸವಗಳನ್ನೂ ನಡೆಯಿಸಿ, ದೇವಿಗೆ ಹರಕೆಯನ್ನು ಸಲ್ಲಿಸಿದರು. ಕಾಲಕ್ರಮದಲ್ಲಿ ಆ ದಂಪತಿಗಳ ಉದರದಲ್ಲಿ ಚಾಮರಾಜರೆಂಬ ಮತ್ತೊಂದು ಪುತ್ರರತ್ನವೂ ಜನಿಸಿ ಅವರ ಸುಖ ಸಂತೋಷಗಳನ್ನು ಇಮ್ಮಡಿಗೊಳಿಸಿತು.

ತರುವಾಯ ಯದುರಾಯರು, ತಮ್ಮ ತಮ್ಮಂದಿರಾದ ಕೃಷ್ಣರಾಯರೂ ಸಹಾಯಕರಾಗಿರಲು, ಸುತ್ತುಮುತ್ತಿನ ತುಂಟರಾದ ಅನೇಕ ಮಂದಿ ಪಾಳೆಯಗಾರರನ್ನು ಅಡಗಿಸಿ ಹಲವು ನಾಡುಗಳನ್ನು ಜಯಿಸಿ ಮೈಸೂರು ರಾಜ್ಯಕ್ಕೆ ಸೇರಿಸಿ ದೇಶವನ್ನು ಬಹು ಮಟ್ಟಿಗೆ ವಿಸ್ತರಿಸಿದರು. ಯದುರಾಯರೆಂದರೆ ದುಷ್ಟರಿಗೆ ಸಿಂಹ ಸ್ವಪ್ನವಾಯಿತು. ಅವರ ರಾಜ್ಯಭಾರದಲ್ಲಿ ಸಕಲ ವಿಧ ಧರ್ಮಕಾರ್ಯಗಳೂ ಅಭಿವೃದ್ಧಿಗೊಂಡುವು. ಛತ್ರ ಮಠ ದೇವಾಲಯಗಳಲ್ಲಿ ಧಾರ್ಮಿಕ ಕಾರ್ಯಕಲಾಪಗಳೂ ದೇವತಾ ಸೇವೆಯೂ ನಿರ್ಬಾಧಕವಾಗಿ ನಡೆಯಲಾರಂಭವಾದುವು. ಆ ಪ್ರಭುಗಳ ಆಳ್ವಿಕೆಯಲ್ಲಿ ತಪ್ಪದೆ ಮಳೆ ಬೆಳೆಗಳಾಗುತ್ತಿರಲು ಪ್ರಜೆ ಪರಿವಾರಗಳೂ ಪಶು ಪಕ್ಷಿಗಳೂ ಸಮೃದ್ಧವಾಗಿ ಆಹಾರ ಪಾನೀಯಗಳನ್ನು ಪಡೆದು ಪುಷ್ಟವಾಗಿದ್ದುವು. ಯದುರಾಯರ ಆಳ್ವಿಕೆಯು ಅಂದಿನ ಶ್ರೀರಾಮಚಂದ್ರನ ರಾಜ್ಯಭಾರವನ್ನೂ ಯುಧಿಷ್ಠಿರನ ಪ್ರಭುತ್ವವನ್ನೂ ಜ್ಞಾಪಿಸುತ್ತಿದೆಯೆಂದು ಪ್ರಜೆಗಳು ಪ್ರಶಂಸಿಸುವಂತಾಯಿತು. ಪ್ರಜೆಗಳು ಎಂದೆಂದಿಗೂ ಈ ಮಹಾರಾಯನೇ ತಮಗೆ ಪ್ರಭುವಾಗಿರಲೆಂದು ಮನೆ ಮನೆಗಳಲ್ಲೂ ಆತನ ಕೀರ್ತಿಯನ್ನು ಪಾಡುತ್ತ ಹರಸಿ ಹಾರೈಸುತ್ತಿದ್ದರು.

ಮೈಸೂರು ರಾಜಮನೆತನವು ಕೊನೆಗಾಣದ ಸಂಕಟಕ್ಕೆ ಗುರಿಯಾಗಿ ನಶಿಸಿ ಹೋಗಲು ಸಿದ್ಧವಾಗಿದ್ದಾಗ ಅದಕ್ಕೆ ಪಾಲಕರನ್ನು ಕಲ್ಪಿಸಿ ಅದನ್ನು ಹೀಗೆ ಉದ್ಧರಿಸಿದ ಮಹಾಕೀರ್ತಿ ಶ್ರೀ ದೇವಾಜಮ್ಮಣ್ಣಿಯವರಿಗೆ ಸಲ್ಲತಕ್ಕದ್ದು. ತಮ್ಮ ದೂರದರ್ಶಿತ್ವ, ಧೈರ್ಯ, ಸಾಹಸ, ಸಮಯ ಸ್ಫೂರ್ತಿ, ರಾಜನೀತಿ ಕುಶಲತೆ ಇವುಗಳಿಂದ ಆ ಮಹಾತಾಯಿಯು ಪುನಃ ಒಂದು ರಾಜವಂಶವನ್ನೇ ಸ್ಥಾಪಿಸಿದ ಚಿರ ಯಶಸ್ಸಿಗೆ ಪಾತ್ರರಾದರು. ಈ ಕಾರಣದಿಂದ ಈ ಮಹಾರಾಣಿಯವರು ಮೈಸೂರು ರಾಜವಂಶಕ್ಕೆ ಪ್ರಾತಃಸ್ಮರಣೀಯರಾಗಿದ್ದಾರೆ. ಈ ಪುರಾತನ ರಾಜವಂಶವನ್ನು ಹೀಗೆ ಬೆಳೆಯಲಿತ್ತು ಅಭಿವೃದ್ಧಿಗೊಳಿಸಿದ ಮಹಾಮಾತೃಶ್ರೀ ದೇವಾಜಮ್ಮಣ್ಣಿಯವರನ್ನು **ಮೈಸೂರಿನ ಪ್ರಥಮ ರಾಜ್ಯಲಕ್ಷ್ಮಿ** ಎಂದು ಗೌರವಿಸುವುದು ನಮ್ಮ ಕರ್ತವ್ಯವಾಗಿದೆಯಲ್ಲವೆ?

# ೯ ನೂತನ ರಾಜ ದಂಪತಿಗಳು

ಮೈಸೂರಿನ ಪ್ರಥಮ ರಾಜ್ಯಲಕ್ಷ್ಮಿ ದೇವಾಜಮ್ಮಣ್ಣಿಯವರ ತರುವಾಯ ಸುಮಾರು ಮೂರು ಶತಮಾನಗಳ ಕಾಲ ರಾಜ್ಯಕ್ಕೆ ಯಾವ ಬಾಧೆಯೂ ಉಂಟಾಗಲಿಲ್ಲ. ಯದುರಾಯರ ಪರಂಪರೆಯಲ್ಲಿ ಬಂದ ರಾಜರುಗಳೇ ಅದನ್ನು ಪಾಲಿಸಿಕೊಂಡು ಬಂದರು. ಅನಂತರ ಅದಕ್ಕೆ ಒದಗಿದ ಒಂದು ಗಂಡಾಂತರದ ಕಥೆಯನ್ನೂ ಅದನ್ನು ತನ್ನ ಧೈರ್ಯ ಸಾಹಸ ಚಾತುರ್ಯಗಳಿಂದ ತೊಲಗಿಸಿ ರಾಜವಂಶವನ್ನು ಸುರಕ್ಷಿತವಾಗಿ ಕಾಪಾಡಿದ ಮೈಸೂರಿನ ದ್ವಿತೀಯ ರಾಜ್ಯ ಲಕ್ಷ್ಮಿಯ ಕಥಾವೃತ್ತಾಂತವನ್ನೂ ಮುಂದಿನ ಪುಟಗಳಲ್ಲಿ ವಿವರಿಸಲಾಗುವುದು.

ಮಹಾರಾಜಾ ಯದುರಾಯರ ರಾಜ್ಯಭಾರವು ಇಪ್ಪತ್ತನಾಲ್ಕು ವರ್ಷ ಕಾಲ ನಡೆಯಿತು. ದೇಶವು ಕೆರೆಕಟ್ಟೆ ಕಾಲುವೆಗಳಿಂದ ತುಂಬಿ ಸಂತೋಷ ಭರಿತವಾಯಿತು. ಪ್ರಜೆ ಪರಿವಾರಗಳವರ ಜೀವಿತವು ಶಾಂತಿ ಸಮಾಧಾನಗಳ ಬೀಡಾಯಿತು. ಮಹಾರಾಜರು, ಎಲ್ಲೋ ಬಹು ದೂರ ದೇಶದಿಂದ ಬಂದ ತಮ್ಮಲ್ಲಿ ವಿಶ್ವಾಸವಿರಿಸಿ, ಕನ್ಯಾದಾನಮಾಡಿ ವಂಶವನ್ನುದ್ಧರಿಸಿ, ರಾಜ್ಯ ಸಂಪತ್ತುಗಳನ್ನು ದೊರಕಿಸಿ, ತಮ್ಮಿಂದ ಒಂದು ರಾಜವಂಶವನ್ನೇ ಪ್ರತಿಷ್ಠಾಪಿಸಿ ಜನ್ಮ ಸಾರ್ಥಕಗೊಳಿಸಿದ ದೇವಾಜಮ್ಮಣ್ಣಿಯವರನ್ನು, ತಮ್ಮ ಮನೆಯ ದೀಪವನ್ನು ಬೆಳಗಿಸಿದ ಮಹಾತಾಯಿಯೆಂದು ದಿನ ದಿನವೂ ಸ್ಮರಿಸಿಕೊಂಡು ಅವರಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನು ಸಮರ್ಪಿಸುತ್ತಿದ್ದರು.

ಮುಂದೆ ಹೀಗೆ ಕೆಲವು ದಿನಗಳು ಕಳೆಯುವುದರೊಳಗಾಗಿ, ಮಹಾರಾಜರಿಗೆ ದೇಹದಲ್ಲಿ ಆಲಸ್ಯ ತೋರಿತು. ತಾವು ಇನ್ನು ಬಹುಕಾಲ ಜೀವಿಸುವ ಭರವಸೆಯಿಲ್ಲವೆಂದು ತಿಳಿದರು. ಒಡನೆಯೇ ತಮ್ಮ ಜ್ಯೇಷ್ಠ ಪುತ್ರರಾದ ಹಿರಿಯಬೆಟ್ಟದ ಚಾಮರಾಜ ಒಡೆಯರಿಗೆ ಶಾ. ಶ. ೧೩೪೬ (ಕ್ರಿ. ಶ. ೧೪೨೩) ನೆಯ ಸಂವತ್ಸರದಲ್ಲಿ ಪಟ್ಟಾಭಿಷೇಕ ಮಾಡಿ, ಚಿರಕಾಲ ಆಳಿಕೊಂಡಿರುವಂತೆ ಆಶೀರ್ವದಿಸಿ ದಿವಂಗತರಾದರು.

ಯದುರಾಯರ ತರುವಾಯ ಸುಮಾರು ಮೂರು ಶತಮಾನ ಕಾಲ ದೇಶಕ್ಕೆ ಪ್ರಬಲ ಗಂಡಾಂತರವೇನೂ ಒದಗಲಿಲ್ಲವೆಂದು ಮೇಲೆ ಹೇಳಿತಲ್ಲವೆ? ಆದರೂ ಈ ಮಧ್ಯಕಾಲವು ಹೂವಿನ ಹಾಸಿಗೆಯಂತೆ ಸುಖಕರವಾಗಿಯೇ

ಇದ್ದಿತೆಂದು ತಿಳಿಯಬಾರದು. ರಾಜರಿಗೂ ಸಿಂಹಾಸನಕ್ಕೂ ಸುತ್ತುಮುತ್ತಿನ ಹಲವು ಮಂದಿ ದುರುಳರಿಂದ ಅನೇಕಾನೇಕ ಬಾಧೆಗಳು ಒದಗುತ್ತಲೇ ಇದ್ದುವು. ಸೈನ್ಯವನ್ನು ತಂದು ದೇಶವನ್ನು ಮುತ್ತಿ ರಾಜ್ಯವನ್ನು ಅಪಹರಿಸಲು ಹವಣಿಸಿದ ಅರಿವೀರರಿಂದಲ್ಲ; ರಾಜಗೃಹದಲ್ಲೇ ಸೇರಿಕೊಂಡು ಆಪ್ತರಂತಿದ್ದು –ಸೇವಕರಂತೆ ವಿಧೇಯರಾಗಿದ್ದು, ಆದರೆ ಕೃತಘ್ನರಾಗಿ, ಅಧಿಕಾರ ಪದವಿಗಳನ್ನು ಅಪಹರಿಸಲು ಉದ್ಯೋಗಿಸಿದ ನೀಚ ಜನರಿಂದ; – ಉಂಡ ಮನೆಗೆ ಎರಡೆಣಿಸಿದ ಪಾಪಿಗಳಿಂದ.

ಆದರೂ, ಈ ಮಧ್ಯಕಾಲದಲ್ಲಿ ರಾಜ್ಯವಾಳಿದ ಕೆಲವು ಮಂದಿ ರಾಜರು, ತಮ್ಮ ಶಕ್ತಿ ಸಾಮರ್ಥ್ಯಗಳು ದೈವಭಕ್ತಿ ಪ್ರತಿಭೆ ಮುಂತಾದುವುಗಳಿಂದ ಅಂತಹ ದುರುಳರನ್ನು ತಲೆಯೆತ್ತಗೊಡದಂತೆ ಅಡಗಿಸಿ, ರಾಜ್ಯಕ್ಕೆ ಬಂದೊದಗಿದ್ದ ಆಪತ್ತುಗಳನ್ನು ನಿವಾರಿಸಿದ ಉದಾಹರಣೆಗಳೂ ಇವೆ. ರಾಜ ಒಡೆಯರೆಂಬ ಪ್ರಭುಗಳು ಮಹಾ ದೈವಭಕ್ತರಾಗಿದ್ದು, ದುಷ್ಟರ ಪ್ರೇರಣೆಯಿಂದ ಅರ್ಚಕನು ತಮಗೆ ಕೊಟ್ಟ ವಿಷ ಬೆರೆದ ಸ್ವಾಮಿಯ ತೀರ್ಥವನ್ನು ನಿಶ್ಶಂಕೆಯಿಂದ ಪಾನಮಾಡಿ ಬದುಕಿದರು. ರಣಧೀರ ಕಂಠೀರವ ನರಸಿಂಹರಾಜ ಒಡೆಯರೆಂಬ ಧೀರರು, ಜಗಜಟ್ಟಿಗಳೆನ್ನಿಸಿ ತಮ್ಮನ್ನು ಮೋಸದಿಂದ ಕೊಲ್ಲಲು ಹವಣಿಸಿ ಬಂದ ಹಲವು ಮಂದಿ ಜಟ್ಟಿಗಳನ್ನು ಏಕಾಂಗಿಗಳಾಗಿ ಎದುರಿಸಿ ಕೊಂದು ಬದುಕಿದರು; ಅಲ್ಲದೆ, ಪುನಃ ಪುನಃ ದಂಡೆತ್ತಿ ಬರುತ್ತಿದ್ದ ಮಹಾರಾಷ್ಟ್ರರ ಮತ್ತು ಮಹಮ್ಮದೀಯರ ಸೇನೆಗಳನ್ನು ಘೋರ ಯುದ್ಧಗಳಲ್ಲಿ ಘಾತಿಸಿ ಓಡಿಸಿದರು. ಮೈಸೂರಿನ ರಣಧೀರ ಕಂಠೀರವ ಅರಸರೆಂದರೆ ಆ ಕಾಲದಲ್ಲಿ ದಕ್ಷಿಣ ಭಾರತದಲ್ಲೆಲ್ಲ ದುಷ್ಟರು ಗಡಗಡನೆ ನಡಗುತ್ತಿದ್ದರು. ಚಿಕ್ಕದೇವರಾಜ ಒಡೆಯರೆಂಬ ನೃಪೋತ್ತಮರ ಕಾಲವಂತೂ ಮೈಸೂರಿನ ಸುವರ್ಣಯುಗವೆಂದು ಪ್ರಖ್ಯಾತವಾಯಿತು. ಈ ಪ್ರಭುಗಳು ಸೈನ್ಯವನ್ನು ಹೆಚ್ಚಿಸಿ ಅದಕ್ಕೆ ಚೆನ್ನಾಗಿ ರಣಶಿಕ್ಷಣ ಕೊಡಿಸಿ ಕೋಟೆ ಕೊತ್ತಲಗಳನ್ನು ಬಲಪಡಿಸಿ ಬತೇರಿಗಳನ್ನು ಭದ್ರಪಡಿಸಿ ಫಿರಂಗಿಗಳನ್ನು ತಯಾರಿಸಿ ಹೀಗೆ ಅಗಾಧ ಸೈನ್ಯಬಲ ಸಮನ್ವಿತರಾಗಿ ಶತ್ರುಭೀಕರರಾಗಿದ್ದರು. ಸುತ್ತುಮುತ್ತಿನ ಪಾಳೆಯಗಾರರಿಗೂ ದುರಾಶಾ ಪೀಡಿತರಾದ ಮರಾಠೇ ಸರದಾರರಿಗೂ ಸದಾ ಮೈಸೂರು ರಾಜ್ಯದ ಮೇಲೆ ಕಣ್ಣಿದ್ದೇ ಇತ್ತು. ಅವರು ದಂಡೆತ್ತಿ ಬಂದಾಗಲೆಲ್ಲ

ಮಹಾರಾಜಾ ಚಿಕ್ಕದೇವರಾಜರ ಪ್ರಬಲ ಸೈನ್ಯದ ಪೆಟ್ಟನ್ನು ತಡೆದು ಕೊಳ್ಳಲಾರದೆ ಶರಣಾಗತರಾಗಿ ತಮ್ಮ ಸರ್ವಸ್ವವನ್ನೂ ಸೂರೆಗೊಟ್ಟು ಓಡಿ ಹೋಗುತ್ತಿದ್ದ ಹಲವು ಉದಾಹರಣೆಗಳುಂಟು. ಹೀಗೆ ಜಯಲಕ್ಷ್ಮಿಯ ಸಂಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದ ಈ ರಾಜವರೇಣ್ಯರ ಕೀರ್ತಿಪ್ರತಾಪಗಳ ವೃತ್ತಾಂತವು ಡೆಲ್ಲಿಯ ಪಾದಷಹನವರೆಗೂ ಹಬ್ಬಿತು ಆ ಮೊಗಲ್ ಚಕ್ರವರ್ತಿಯು ತನ್ನ ಆಸ್ಥಾನವನ್ನು ಸಂದರ್ಶಿಸಿದ ಮೈಸೂರಿನ ರಾಯಭಾರಿಗೆ ಸಭೆಯಲ್ಲಿ ಉಚಿತ ಗೌರವಸ್ಥಾನವನ್ನಿತ್ತು ಮನ್ನಿಸಿ, ಮಹಾರಾಜರಿಗೆ **ರಾಜಾ ಜಗದೇವ್** ಎಂಬ ಬಿರುದನ್ನೂ, ನಗಾರಿ ನೌಬತ್ತು ಮರ್ಯಾದೆಗಳನ್ನೂ, ಮಕರ ಮತ್ಸ್ಯ ಶರಭ ಸಾಳ್ವ ಮುಂತಾದ ಗೌರವ ರಾಜಚಿನ್ಹೆಗಳನ್ನೂ ಕೊಟ್ಟದ್ದಲ್ಲದೆ, 'ರಾಜಾ ಚಿಕ್ಕದೇವರಾಜ್ ಮಹಮ್ಮದ್ ಷಾಹೀ' ಎಂಬ ಪಾರ್ಶಿ ಭಾಷೆಯ ಮೊಹರನ್ನು ಸಕಲ ರಾಜಮರ್ಯಾದೆಗಳೊಂದಿಗೆ ಕಳು ಹಿಸಿ, ಮೈಸೂರು ರಾಜರೊಂದಿಗೆ ಸ್ನೇಹವು ತನಗೆ ಚಿರಕಾಲವಿರಬೇಕೆಂದು ಅಪೇಕ್ಷಿಸಿದನು.

ಹೀಗೆ ಯದುರಾಯರ ತರುವಾಯ ಮುನ್ನೂರು ವರ್ಷಗಳ ಮೈಸೂರಿನ ರಾಜ್ಯಭಾರವು ದೇಶ ವಿದೇಶಗಳಲ್ಲಿ ಪ್ರಖ್ಯಾತಿಯನ್ನುಗಳಿಸಿ ನಾಗಿತು. ಅನಂತರ ದೊಡ್ಡ ಕೃಷ್ಣರಾಜ ಒಡೆಯರೆಂಬುವರು ಮೈಸೂರಿನ ಪ್ರಭುಗಳಾದರು. ವಿಷಯಾಭಿಲಾಷಿಗಳಾಗಿದ್ದ ಅವರು, ರಾಜ್ಯವಿಚಾರವನ್ನು ಸ್ವಲ್ಪ ಮಟ್ಟಿಗೆ ಮಾನಸಿಕ ಮಾಡಿದ್ದರಿಂದ, ಈ ರಾಜರ ಕಾಲದಲ್ಲಿ ದೇಶವು, ಶತ್ರುರಾಜರ ಸೈನ್ಯಗಳ ಧಾಳಿಗೆ ಫಲವತ್ತಾದ ಬೀಡಾಯಿತು. ಈವರೆಗೆ ಅನೇಕ ವೇಳೆ ಭಂಗಪಟ್ಟು ಓಡಿದ್ದ ಮರಾಠೇ ಸರದಾರರು, ರಾಜ್ಯದಲ್ಲಿಯ ಅವ್ಯವಸ್ಥೆಯನ್ನು ಕಂಡು ಪ್ರಬಲ ಸೈನ್ಯದೊಂದಿಗೆ ಬಂದು ದೇಶವನ್ನು ಆಕ್ರಮಿಸಿದರು. ಅಶಕ್ತ ರಾದ ಈ ರಾಜರು ಉಪಾಯ ಕಾಣದೆ ಒಂದು ಕೋಟಿ ರೂಪಾಯಿ ಕೊಟ್ಟು ಅವರೊಂದಿಗೆ ಸಂಧಿಮಾಡಿಕೊಂಡು ಶತ್ರುವನ್ನು ಸಾಗಕಳುಹಿಸಿ ದೇಶವನ್ನು ಉಳಿಸಿಕೊಂಡರು.

ದೇಶದ ಒಡೆತನವೇನೋ ರಾಜವಂಶಕ್ಕೇ ಉಳಿಯಿತಾದರೂ ಕೋಟಿ ಗಟ್ಟಲೆ ದ್ರವ್ಯವು ಕೈಬಿಟ್ಟು ಹೋದುದೂ, ಶತ್ರುಗಳು ಎಲ್ಲೆಲ್ಲೂ ಪ್ರಬಲಿಸು ತ್ತಿದ್ದುದೂ ರಾಜರಿಗೆ ಮನೋರೋಗವಾಗಿ ಪರಿಣಮಿಸಿತು. ಅಪುತ್ರವಂತರಾಗಿ

ಇದ್ದುದರಿಂದ ತಮ್ಮ ತರುವಾಯ ರಾಜಸಿಂಹಾಸನವು ಬೇರೆಯವರ ಪಾಲಾಗುವುದೆಂಬ ಭೀತಿಯೂ ಅವನನ್ನು ವಿಶೇಷ ಕಂಗೆಡಿಸಿತು. ಈ ಮನೋವ್ಯಥೆಯೇ ಅಧಿಕವಾಗಿ ಅವರು ಮುಂದೆ ಸ್ವಲ್ಪ ದಿವಸಗಳಲ್ಲೇ ಕೀರ್ತಿಶೇಷರಾದರು.

ಇವರ ಮರಣದೊಂದಿಗೆ ದೇಶಕ್ಕೆ ಪುನಃ ದುರ್ದಿನಗಳು ಪ್ರಾರಂಭವಾದುವು. ರಾಜರು ಹೀಗೆ ಸಂತತಿಯಿಲ್ಲದೆ ಮೃತರಾದುದರಿಂದ ಅಂತಃಪುರವನ್ನು ಬಿಟ್ಟು ಹೊರಕ್ಕೆ ಬರಲರಿಯದ ರಾಜಸ್ತ್ರೀಯರೇ ರಾಜ್ಯಕ್ಕೆ ಬಾಧ್ಯಸ್ಥರಾಗಿ ನಿಲ್ಲುವಂತಾಯಿತು ಆಗ ಇದ್ದ ಅಧಿಕಾರಿ ವರ್ಗದಲ್ಲಿ ದಳವಾಯಿ ದೇವರಾಜಯ್ಯ, ನಂಜರಾಜಯ್ಯ ಮತ್ತು ಕರಾಚೂರಿ ನಂಜರಾಜಯ್ಯ ಎಂಬೀ ಜನರು ಪ್ರಬಲರಾಗಿದ್ದರು. ಕಾಲಕ್ರಮೇಣ ಈ ಅಧಿಕಾರಿಗಳೇ ರಾಜವಂಶವನ್ನು ಮೂಲೆಗೊತ್ತಿ ಸ್ವಯಂ ಪ್ರತಿಷ್ಠಿತ ರಾಜನಿರ್ಮಾಪಕರಾಗಿ ರಾಜ್ಯಸೂತ್ರಗಳನ್ನು ನಡೆಯಿಸಲಾರಂಭಿಸಿದರು.

ದೊಡ್ಡ ಕೃಷ್ಣರಾಜ ಒಡೆಯರ ತರುವಾಯ ಪಟ್ಟವೇರಿದ್ದ ಚಾಮರಾಜರೆಂಬವರು, ಈ ಸರ್ವಾಧಿಕಾರಿಗಳ ಮೋಸಕ್ಕೆ ಬಲಿಯಾದುದರಿಂದ ರಾಜಸಿಂಹಾಸನವು ಬರಿದಾಯಿತು. ರಾಜ್ಯವು ಪುನಃ ರಾಜಸ್ತ್ರೀಯರ ಬಾಧ್ಯತೆಗೆ ಒಳಪಟ್ಟಿತು. ಆಗ ಅವರಿಗೆ ಇಮ್ಮಡಿ ಕೃಷ್ಣರಾಜ ಒಡೆಯರೆಂಬ ಮೂರು ವರ್ಷದ ಒಂದು ಮಗುವನ್ನು ಸರ್ವಾಧಿಕಾರಿಗಳೇ ದತ್ತುಕೊಡಿಸಿ, ಪುನಃ ತಾವೇ ನಿರಾತಂಕವಾಗಿ ಆಧಿಪತ್ಯ ನಡೆಯಿಸತೊಡಗಿದರು. ಹೀಗೆ ಅವರ ಆಡಳಿತವು ಹದಿನೈದು ವರ್ಷಗಳ ಕಾಲ ನಾಗಿತು. ಅಧಿಕಾರದ ರುಚಿಯು ನೆತ್ತಿಗೇರಿತು. ಸಿಂಹಾಸನವನ್ನು ತಾವೇ ಆಕ್ರಮಿಸಬಾರದೇಕೆ? ಎಂಬ ದುರಾಲೋಚನೆಯೂ ಅವರಿಗುಂಟಾಯಿತು.

ಇಮ್ಮಡಿ ಕೃಷ್ಣರಾಜ ಒಡೆಯರು ದೊಡ್ಡ ಕೃಷ್ಣರಾಜ ಒಡೆಯರ ಪತ್ನಿ ದೇವಾಜಮ್ಮಣ್ಣಿಯವರ ಪಾಲನೆಯಲ್ಲಿ ಬೆಳೆದು ವಿದ್ಯಾಬುದ್ಧಿಗಳನ್ನು ಕಲಿತು ಪ್ರಬುದ್ಧರಾದರು. ವಯಸ್ಸಿಗೆ ಬಂದ ಈ ರಾಜರಿಗೆ ಆಡಳಿತವನ್ನು ಒಪ್ಪಿಸಿಕೊಡುವ ಮನಸ್ಸಿಲ್ಲದೆ ಸರ್ವಾಧಿಕಾರಿಗಳು ಅವರನ್ನೂ ಅವರ ಹಿಂದಿನ ಚಾಮರಾಜರಂತೆಯೇ ತಮ್ಮ ಅಂಕೆಯಲ್ಲಿಟ್ಟುಕೊಳ್ಳಬೇಕೆಂದು ಹವಣಿಸಿದರು. ಆದರೆ ಮಹಾತೇಜಸ್ವಿಗಳೂ ಪ್ರತಿಭಾಶಾಲಿಗಳೂ ಶೂರರೂ ಆದ ಇಮ್ಮಡಿ

ಅರಸರು ಆ ಸ್ವಾರ್ಥಸಾಧಕರ ಆಡಳಿತದಿಂದ ದೇಶಕ್ಕೂ ರಾಜಮನೆತನಕ್ಕೂ ಉಂಟಾಗುತ್ತಿದ್ದ ಹಲವು ಹಾನಿಗಳನ್ನು ಪ್ರತ್ಯಕ್ಷ ತಿಳಿದಿದ್ದುದರಿಂದ ಅವರ ಪ್ರಾಬಲ್ಯವನ್ನು ಅಡಗಿಸಿ ರಾಜ್ಯಭಾರವನ್ನು ಸ್ವತಃ ತಾವು ವಹಿಸಿಕೊಳ್ಳ ತಕ್ಕುದೇ ಸೂಕ್ತವೆಂದು ಭಾವಿಸಿದರು. ಮಹಾರಾಜರ ಈ ಉದ್ದೇಶವನ್ನು ತಿಳಿದೊಡನೆಯೇ ಮಹಾರಾಜರಿಗೆ ಹೆಣ್ಣುಕೊಟ್ಟ ಮಾವನಾದ ಕರಾಚೂರಿ ನಂಜರಾಜಯ್ಯನೇ ಅರಮನೆಯ ಎದುರಿಗೆ ನಾಲ್ಕು ಫಿರಂಗಿಗಳನ್ನು ತಂದು ಎತ್ತಿಕಟ್ಟಿಸಿ, ಸೈನಿಕರನ್ನೆಲ್ಲ ತಿರುಗಿಬೀಳಲು ಪ್ರೇರಿಸಿ ಅವರನ್ನು ಭಂಗಪಡಿಸುವ ಉದ್ಯೋಗ ನಡೆಯಿಸಿದನಂತೆ! ಒಳಮನೆಯಲ್ಲಿ ಪೂಜಾಕಾರ್ಯದಲ್ಲಿದ್ದ ಮಹಾ ರಾಜರಿಗೆ ದುರುಳನ ಈ ಕಾರ್ಯವು ಅರಿಕೆಯಾದೊಡನೆಯೇ, ಅವರು ಭಯಂಕರ ರೋಷ ಭೀಷಣರಾಗಿ ಪಟ್ಟೆಮಡಿಯನ್ನು ಉಟ್ಟಿದಂತೆಯೇ ತಮ್ಮ ಚಂದ್ರಾಯುಧವನ್ನು ಕೈಯಲ್ಲಿ ಹಿಡಿದು ಅರಮನೆಯ ಮಹಾ ದ್ವಾರದಿಂದ ಹೊರ ಹೊರಟರು. ಸಿಂಹ ಗರ್ಜನೆಮಾಡುತ್ತ, ಹಾರಿ ಹಾರಿಕೊಂಡು ಬರು ತ್ತಿದ್ದ ಆ ಧೀರ ಮೂರ್ತಿಯನ್ನು ಕಂಡೊಡನೆಯೇ ಆ ಪುಂಡರ ತಂಡವೆಲ್ಲವೂ ಕೈಕಾಲುಗಳು ಆಡದಂತೆ ನಿಂತುಬಿಟ್ಟರು. ಅಲ್ಲಿ ನೆರೆದಿದ್ದ ಹಲವು ಮಂದಿ ರಾಜದ್ರೋಹಿಗಳನ್ನು ಘಾತಿಸಿ ಆ ವೀರಾಗ್ರೇಸರರು ಪುಂಡರನ್ನು ಅಡಗಿಸಿದರು. ಮಹಾರಾಜರ ಆ ತೇಜಃಪುಂಜ ಮೂರ್ತಿಯನ್ನು ಕಂಡ ದುರುಳರೆಲ್ಲರೂ ಪ್ರಾಣದೊಂದಿಗೆ ಉಳಿದೇವೇ ಎಂದು ಅಲ್ಲಲ್ಲೇ ಅಡಗಿ ತಲೆ ತಪ್ಪಿಸಿಕೊಂಡರು. ದ್ರೋಹಿ ದೇವರಾಜಯ್ಯನು ಪ್ರಾಣಭಯದಿಂದ ಓಡುವಾಗ ಆನೆಯ ಕಾಲಿಗೆ ಸಿಕ್ಕು ಜಜ್ಜಲ್ಪಟ್ಟು ಪ್ರಾಣಬಿಟ್ಟನು. ನಂಜರಾಜಯ್ಯನು ದೇಶಭ್ರಷ್ಟನಾಗಿ ಪತ್ಯಮಂಗಲ ಪ್ರಾಂತಕ್ಕೆ ಓಡಿಹೋಗಿರಲು, ಅವನನ್ನು ಹಿಡಿತರಿಸಿ ರಾಜರು ಮರಣದಂಡನೆಯನ್ನು ವಿಧಿಸಿದರು. ಆದರೆ ಮಹಾರಾಣಿ ಪುಟ್ಟಮ್ಮಣ್ಣಿ ಯವರು, ದ್ರೋಹಿಯಾದರೂ ತಮ್ಮ ತಂದೆಯಾದ ಆತನ ಪ್ರಾಣಗಳನ್ನುಳಿಸಿ ಕಾಪಾಡಬೇಕೆಂದು ಬೇಡಿಕೊಂಡುದರಿಂದ, ದಯಾಳುಗಳಾದ ಪ್ರಭುಗಳು ಅವನ ಅಪರಾಧವನ್ನು ಮನ್ನಿಸಿ ಜೀವನಾಂಶವನ್ನುಕೊಡಿಸಿ, – ಎಲ್ಲಾದರೂ ಜೀವಿಸಿಕೊಂಡಿರಲೆಂದು ರಾಜಧಾನಿಯಿಂದ ಹೊರಕ್ಕೆ ಸಾಗಕಳುಹಿಸಿದರಂತೆ!

ಹೀಗೆ ರಾಜಬಂಧುಗಳಾಗಿ ರಾಜಧಾನಿಯಲ್ಲೇ ನೆಲಸಿ, ನೆಲೆಗಂಡ ಕಳ್ಳ ರಂತೆ ಪ್ರಾರಂಭದಿಂದಲೂ ರಾಜವಂಶವೃಕ್ಷದ ತಾಯಿಬೇರುಗಳನ್ನೇ ಕತ್ತರಿಸ

ತೊಡಗಿದ್ದ ಈ ಘಾತುಕರು ಹೀಗೆ ನಷ್ಟವಾದುದರಿಂದ ಮುಂದೆ ರಾಜ್ಯವು ನಿಷ್ಕಂಟಕವಾಯಿತು. ತರುವಾಯ ಮಹಾರಾಜರು ಸತ್ಕುಲ ಪ್ರಸೂತೆಯ ರಾದ ಇನ್ನಿಬ್ಬರು ಕನ್ಯೆಯರನ್ನೂ ವಿವಾಹವಾದರು. ಅವರಲ್ಲೊಬ್ಬರು ಬೇಲೂರು ದೇವಾಜಮ್ಮಣ್ಣಿಯೆಂಬುವರು; ಇನ್ನೊಬ್ಬರು ಲಕ್ಷ್ಮಮ್ಮಣ್ಣಿ ಯವರೆಂಬುವರು. ಈ ಮಹಾರಾಣಿ ಲಕ್ಷ್ಮಮ್ಮಣ್ಣಿಯವರೇ ಮೈಸೂರಿಗೆ ಪ್ರಾಪ್ತವಾಗಿದ್ದ ಒಂದು ಪ್ರಬಲ ಗಂಡಾಂತರದಿಂದ ಅದನ್ನು ಪಾರುಮಾಡಿ ಈ ಪುರಾತನ ಹಿಂದೂ ಸಂಸ್ಥಾನವನ್ನು ಪುನಃ ಹಿಂದಿನ ರಾಜವಂಶಕ್ಕೇ ಉಳಿಸಿ, **ಮೈಸೂರಿನ ದ್ವಿತೀಯ ರಾಜ್ಯಲಕ್ಷ್ಮಿಯೆಂದೂ ಮಹಾಮಾತೃಶ್ರೀ** ಎಂದೂ ಸುಪ್ರಖ್ಯಾತರಾದವರು.

ಶ್ರೀ ಲಕ್ಷ್ಮಮ್ಮಣ್ಣಿಯವರು ಕತ್ತಿಗೋಪಾಲರಾಜ ಅರಸರೆಂಬ ಸರ ದಾರರ ಪುತ್ರಿ. ಸರದಾರರು ಚಾಮರಾಜರ ಕಾಲದಲ್ಲಿ ಮೈಸೂರು ಸೈನ್ಯದಲ್ಲಿ ಹೆಸರಾದ ಅಧಿಕಾರಿಗಳು. ಇವರ ವಂಶವು ವಿಶೇಷ ಗೌರವ ಸಂಪನ್ನ ವಾದುದು. ಅರಸರು ಮಹಾ ಶೂರರು; ತಮ್ಮ ಸೈನ್ಯವನ್ನು ಉತ್ತಮ ಸ್ಥಿತಿ ಯಲ್ಲಿಟ್ಟುಕೊಂಡು ಮಹಾರಾಜರಿಗಾಗಿ ಅನೇಕ ಯುದ್ಧಗಳನ್ನು ಜಯಿಸಿ ಕೊಟ್ಟಿದ್ದರು. ಆ ಯುದ್ಧಗಳಲ್ಲೆಲ್ಲ ಅವರು ತಿರುಚನಾಪಳ್ಳಿಯ ನವಾಬ ಮಹಮ್ಮದ್ದಲ್ಲಿಯ ಮೇಲೆ ದಂಡೆತ್ತಿಹೋಗಿ ನಡೆಯಿಸಿದ ಯುದ್ಧವೇ ಮಹಾ ಪ್ರಸಿದ್ಧವಾದುದು. ಇದರಿಂದ ಅವರ ಮೇಲೆ ರಾಜರ ಅಭಿಮಾನವು ವಿಶೇಷ ವಾಗಿ ಬೆಳೆಯಲು ಕಾರಣವಾಯಿತು.

ಮಹಾರಾಜರ ವಿಶೇಷ ಪ್ರೀತಿಗೆ ಪಾತ್ರರಾದ ಕತ್ತಿಗೋಪಾಲರಾಜ ಅರಸರ ಮನೆಯವರೊಂದಿಗೆ ಅರಮನೆಯ ಬಳಕೆಯೂ ವಿಶೇಷವಾಗಿ ಬೆಳೆ ಯಿತು. ಇವರಿಗೆ ತಮ್ಮ ಧರ್ಮಪತ್ನಿಯಲ್ಲಿ ಕ್ರಿ.ಶ. ೧೭೪೨ನೆಯ ಸಂವತ್ಸರದಲ್ಲಿ ಜನಿಸಿದ ಒಂದು ಕನ್ಯಾರತ್ನವು, ರಾಜಕುಟುಂಬದಲ್ಲಿ ಎಲ್ಲರಿಗೂ ಅಚ್ಚು ಮೆಚ್ಚಾಗಿ, ಆಟಪಾಟಗಳಿಂದ ಎಲ್ಲರನ್ನೂ ಸಂತೋಷಪಡಿಸುತ್ತ ಬೆಳೆಯಿತು. ಆ ಕನ್ಯೆಯ ಬಾಲಲೀಲೆಗಳಿಗೆ ಮಹಾರಾಣಿಯವರಾದಿಯಾಗಿ ಸಕಲರೂ ಪರಮಾನಂದಗೊಳ್ಳುವರು. ಮುದ್ದಿನ ಮೂಟೆಯಂತಿದ್ದ ಆ ಮಗುವನ್ನು ವಿವಿಧ ವಸ್ತ್ರ ಆಭರಣಗಳಿಂದ ಸಿಂಗರಿಸಿ, ಆ ದಂಪತಿಗಳು ತಮ್ಮ ಮನೆಯಲ್ಲಿ ಲಕ್ಷ್ಮಿಯೇ ಅವತರಿಸಿದಳೆಂದು ಹರ್ಷಗೊಳ್ಳುವರು. ನೋಡಿದವರೆಲ್ಲರೂ

ಆ ಬಾಲಿಕೆಗಿಟ್ಟಿದ್ದ ಲಕ್ಷ್ಮಮ್ಮಣ್ಣಿ ಎಂಬ ಹೆಸರು ಸಾರ್ಥಕವಾದುದು, ಎಂದು ಸಂತೋಷಪಡುತ್ತಿದ್ದರು.

ಲಕ್ಷ್ಮಮ್ಮಣ್ಣಿಯು, ಸತ್ಕುಲದಲ್ಲಿ ಜನಿಸಿದವರೂ ಸುಗುಣಮಂಡಿತರೂ ಆದ ಸಖಿಯರೊಂದಿಗೆ ಆಡುತ್ತ ಪಾಡುತ್ತ ದಿನ ದಿನಕ್ಕೆ ಕ್ಷಣಕ್ಷಣಕ್ಕೆ ಬೆಳೆಯುತ್ತಿದ್ದಳು. ಸಂಗೀತ ಸಾಹಿತ್ಯ ಚಿತ್ರಕಲೆ ಕಸೂತಿ ರಂಗವಲ್ಲಿ ಮುಂತಾದ ಸಮಸ್ತ ಕುಶಲ ಕಲೆಗಳಲ್ಲೂ ಪ್ರೌಢೆಯೆನಿಸಿದಳು. ಇವುಗಳೊಂದಿಗೇ ನಾರೀ ಕುಲಕ್ಕೆ ಭೂಷಣಪ್ರದಗಳಾದ ನಯ ವಿನಯಗಳೂ ಶೃಂಗಾರ ಗಾಂಭೀರ್ಯಗಳೂ ಲಜ್ಜೆ ದಯಾದಾಕ್ಷಿಣ್ಯಾದಿಗಳೂ ಆಕೆಯಲ್ಲಿ ಮನೆಮಾಡಿಕೊಂಡಿದ್ದುವು. ಮಮತೆ ಮೃದುನುಡಿ ಇವು ಆಕೆಯಲ್ಲೇ ಜನ್ಮವೆತ್ತಿದ್ದುವೆನ್ನಬಹುದು. ಆ ಬಾಲಿಕೆಯು ಒಂದು ದಿನಕ್ಕಾದರೂ ದಾದಿಯರನ್ನಾಗಲೀ ಸೇವಕರನ್ನಾಗಲೀ ಗದರಿಸಿಕೊಂಡವಳಲ್ಲ. ಒಂದು ದಿನಕ್ಕಾದರೂ ಯಾವ ಪ್ರಾಣಿಯನ್ನೂ ಹಿಂಸಿಸಿ ಪೀಡಿಸಿ ನೋಯಿಸಿ ಅರಿಯಳು. ಬಡವರು ಭಿಕ್ಷುಕರು ಅಂಗ ವಿಹೀನರು ಎಂದರೆ ಎದೆಕರಗಿ, ತಾನು ತಿನ್ನುವುದನ್ನಾದರೂ ಅವರಿಗಿತ್ತು ತೃಪ್ತಿಪಡಿಸುವಳು. ಆಕೆಯ ಸೇವೆಗೆಂದರೆ ಅರಮನೆಯ ದಾದಿಯರು ನಾನು ತಾನೆಂದು ಮುಂದೆ ಬಂದು, ಆಕೆಯು ಹೇಳಿದ ಕೆಲಸವನ್ನು ತಲೆಯಲ್ಲಿ ಹೊತ್ತು ಮಾಡುವರು. ಆಕೆಯ ನಗುಮುಖವು ಸರ್ವರ ಮನಸ್ಸನ್ನೂ ಆಕರ್ಷಿಸಿ ಸ್ವಾಧೀನಪಡಿಸಿಕೊಳ್ಳುವಲ್ಲಿ ಎಂದೂ ಅಪಜಯ ಹೊಂದಿದುದಿಲ್ಲ.

ಹೀಗೆ ಸದ್ಗುಣಗಳೆಂಬ ಮಣಿಭೂಷಣಗಳಿಂದ ಅಲಂಕೃತಳಾಗಿದ್ದ ತಮ್ಮ ಮಗಳಿಗೆ ತಕ್ಕ ವರನನ್ನು ಎಲ್ಲಿ ಹುಡುಕುವುದು ಎಂದು ಆಕೆಯ ತಾಯಿ ತಂದೆಗಳು ಬಹು ಯೋಚನೆಗೀಡಾದರು. ಆದರೆ ಆ ಕನ್ಯಾಶಿರೋಮಣಿಯ ಪುಣ್ಯೋದಯದಿಂದ ಅವರು ಹಾಗೆ ಬಹು ದಿನಗಳು ತೊಂದರೆಪಡಬೇಕಾಗಲಿಲ್ಲ. ಸರದಾರ ಗೋಪಾಲರಾಜ ಅರಸರಿಗೆ ವಿಶೇಷ ಶ್ರಮವಿಲ್ಲದೆಯೇ, ಒಂದು ಅತ್ಯುತ್ತಮ ಸಂಬಂಧವೇ ದೊರೆತು, ಆ ದಂಪತಿಗಳಿಗೆ ಮಹದಾನಂದವನ್ನುಂಟು ಮಾಡಿತು. ಇಮ್ಮಡಿ ಕೃಷ್ಣರಾಜ ಒಡೆಯರು ಸರದಾರರ ಮಗಳ ದಿವ್ಯರೂಪ ವೈಭವವನ್ನೂ ಸುಗುಣ ಸಂಪದ್ವಿಚಾರವನ್ನೂ ಕೇಳಿ ಆ ಕನ್ಯಾಶಿರೋಮಣಿಗೆ ತಮ್ಮ ಹೃದಯ ಪೀಠದಲ್ಲೇ ಸ್ಥಾನಕೊಡಬೇಕೆಂದು ಸಂಕಲ್ಪಿಸಿದರು. ಮಹಾರಾಜರ ಮನಸ್ಸಿನಲ್ಲಿ ಹುಟ್ಟಿದ ಈ ಸಂಕಲ್ಪ ವಿಚಾರವು ಯೋಗ್ಯ

ಬಂಧುಜನರ ಮೂಲಕ ಗೋಪಾಲರಾಜ ಅರಸರಿಗೆ ತಿಳಿಯಿತು. ಆ ವಾರ್ತೆಯನ್ನು ಕೇಳಿ ಆ ದಂಪತಿಗಳ ಆನಂದಾಶ್ಚರ್ಯಗಳು ಮೇರೆ ಮೀರಿದುವು. ಆ ಸರ್ವೋತ್ತಮ ಸಂಬಂಧಕ್ಕೆ ಅವರು ತಮ್ಮ ಸಮ್ಮತಿಯನ್ನಿತ್ತರೆಂದು ಹೇಳಬೇಕಾದುದೇನಿದೆ?

ಒಂದು ಶುಭದಿನದ ಶುಭಮುಹೂರ್ತದಲ್ಲಿ ಲಗ್ನ ನಿಶ್ಚಯಮಾಡಲ್ಪಟ್ಟಿತು ಮುಂದೆ ಉಭಯ ಪಕ್ಷಗಳವರೂ ವಿವಾಹ ಸಂಬಂಧ ಸಾಮಗ್ರಿಗಳನ್ನು ಸಿದ್ಧಪಡಿಸತೊಡಗಿದರು. ಗೋಪಾಲರಾಜ ಅರಸರು, ರಾಜ್ಯಾಧಿಪತಿಯಾದ ತಮ್ಮ ಅಳಿಯನಿಗೆ ಯೋಗ್ಯ ಸತ್ಕಾರಪೂರ್ವಕ ಕನ್ಯಾದಾನ ಮಾಡಬೇಕೆಂದು ತಮ್ಮ ಶಕ್ತಿಮೀರಿ ಸಿದ್ಧತೆಮಾಡಿಕೊಂಡರು. ಇನ್ನು ಸ್ವಯಂ ರಾಜರೇ ಆದ ಇಮ್ಮಡಿ ಪ್ರಭುಗಳು ಇಬ್ಬರು ಪತ್ನಿಯರ ಮೇಲೆ ಮೂರನೆಯದಾಗಿ ಮನ ಮೆಚ್ಚಿ ಮಾಡಿಕೊಳ್ಳಲಿದ್ದ ಆ ವಿವಾಹಕ್ಕಾಗಿ ಎಷ್ಟು ಸಂಭ್ರಮದಿಂದ ಎಷ್ಟು ಬಗೆಯ ವಸ್ತುಸಾಮಗ್ರಿಗಳ ಸಿದ್ಧತೆಮಾಡಿಸಿದರೆಂದು ಹೇಳಬಹುದು?

ಶಾ. ಶ. ೧೬೬೧ನೆಯ ಪ್ರಮಾಥಿ ಸಂವತ್ಸರದ ಮಾಘ ಮಾಸದ ಒಂದು ಶುಭದಿನ ಶುಭಮುಹೂರ್ತದಲ್ಲಿ ವಿವಾಹ ಮಂಗಳಕಾರ್ಯವು ನಡೆಯತಕ್ಕದ್ದೆಂದು ಲಗ್ನಪತ್ರಿಕೆಯಾಯಿತು. ದೇಶದ ಅಸಂಖ್ಯ ಪ್ರಜಾವರ್ಗವೂ ಅನೇಕ ಮಂದಿ ಮುಖ್ಯಾಧಿಕಾರಿಗಳೂ ಇತರ ದೇಶಗಳ ಮಿತ್ರ ರಾಜರೂ ಬಂದು ರಾಜಧಾನಿಯಲ್ಲಿ ನೆರೆದರು. ಭವ್ಯವಾದ *ಕಲ್ಯಾಣ ಮಂಟಪವು ತೋರಣ ಮೇಲ್ಕಟ್ಟುಗಳಿಂದ ಶೃಂಗಾರವಾಯಿತು. ವಿಧ್ಯುಕ್ತವಾಗಿ ನಡೆಯಬೇಕಾದ ಸಕಲ ಮಂಗಳಕಾರ್ಯಗಳೂ ಸಾಂಗವಾಗಿ ನಡೆದುವು. ನೆರೆದ ಸಕಲರೂ ಗಂಧಪುಷ್ಪ ತಾಂಬೂಲ ಉಡುಗೊರೆ ಉತ್ಸವಾದಿಗಳಿಂದ ಸತ್ಕರಿಸಲ್ಪಟ್ಟರು. ಸಕಲರಿಗೂ ಅಗಾಧ ರೀತಿಯ ಅನ್ನದಾನ ವಸ್ತ್ರದಾನಾದಿಗಳು ನಡೆದುವು. ಸಮಸ್ತರೂ ಆ ನೂತನ ರಾಜದಂಪತಿಗಳು ಚಿರಕಾಲ ಸುಖ ಸಂತೋಷಗಳನ್ನನುಭವಿಸುತ್ತಾ ಪ್ರಜೆ ಪರಿವಾರಗಳನ್ನು ಮಕ್ಕಳಂತೆ ಕಾಪಾಡಿಕೊಂಡಿರಲೆಂದು ಹಾರೈಸಿದರು.

---

* ಆ ಸಂದರ್ಭದಲ್ಲಿ ಚನ್ನನೆಂಬೊಬ್ಬ ಶಿಲ್ಪಿಯು ವಿಚಿತ್ರತರವಾದ ಒಂದು ಹಸೆ ಜಗುಲಿಯನ್ನು ರಚಿಸಿ ಮಹಾಸ್ವಾಮಿಯವರಿಗೆ ಒಪ್ಪಿಸಿ ಅವರ ಮೆಚ್ಚುಗೆಗೆ ಪಾತ್ರನಾದನು. ಅವನ ಚಾತುರ್ಯವನ್ನು ಕಂಡು ಸುಪ್ರೀತರಾದ ರಾಜರು, ಅವನಿಗೆ ವಂಶಪಾರಂಪರ್ಯವಾಗಿ ವರ್ಷಕ್ಕೆ ೬೦ ವರಹ ಉತ್ಪತ್ತಿಯಾಗುವ ಜಮೀನನ್ನು ಉಂಬಳಿ ಹಾಕಿಕೊಟ್ಟರಂತೆ.

# ೧೦ ಹೈದರಾಲಿಯ ಸರ್ವಾಧಿಕಾರ

ಇಮ್ಮಡಿ ಕೃಷ್ಣರಾಜ ಒಡೆಯರು ಇನ್ನೂ ಬಾಲ್ಯಾವಸ್ಥೆಯಲ್ಲಿದ್ದ ಕಾಲ. ದೇಶವು ಸರ್ವಾಧಿಕಾರಿ ದೇವರಾಜಯ್ಯ, ದಳವಾಯಿ ನಂಜರಾಜಯ್ಯ ಮುಂತಾದವರ ಆಡಳಿತದಲ್ಲೇ ಇತ್ತು. ಆಗ ಕೇವಲ ಬಡವನೂ ಅನಾಮಧೇಯನೂ ಆಗಿದ್ದರೂ ಮುಂದೆ ಮಹಾ ಪ್ರಸಿದ್ಧನಾದ ಒಬ್ಬ ವ್ಯಕ್ತಿಯು ಮೈಸೂರು ಸೈನ್ಯದಲ್ಲಿ ನೌಕರನಾಗಿ ಬಂದು ಸೇರಿದನು. ಆತನೇ ಹೈದರಲ್ಲೀಖಾ಼ ಎಂಬ ಮುಹಮ್ಮದೀಯನು.

ಹೈದರನು ಬಹು ಬಡತನ ಸ್ಥಿತಿಯಲ್ಲಿ ಹುಟ್ಟಿದವನು. ಆದರೆ ಶೂರನು, ಉಪಾಯ ಕುಶಲನು, ಸಮಯೋಚಿತ ಬುದ್ಧಿವಂತಿಕೆಯಿಂದ ಶತ್ರುಗಳನ್ನು ಹಣ್ಣಿಗೆ ತರುವ ಸಾಮರ್ಥ್ಯವುಳ್ಳವನು; ಸೈನ್ಯವನ್ನು ದರ್ಪದಿಂದ ತನ್ನ ಆಜ್ಞೆಗೆ ಒಳಪಡಿಸಿಕೊಂಡು ಎಂತಹ ಕಷ್ಟಕಾರ್ಯವನ್ನಾದರೂ ಧೈರ್ಯದಿಂದ ನಿರ್ವಹಿಸಬಲ್ಲ ಶಕ್ತನು. ಸೈನ್ಯದಲ್ಲಿ ಒಂದು ಸಣ್ಣ ನೌಕರಿಗೆ ಸೇರಿದ ಈತನು ತನ್ನ ಶಕ್ತಿಸಾಮರ್ಥ್ಯಗಳಿಂದ ಮೇಲ್ಪಟ್ಟವರನ್ನು ಮೆಚ್ಚಿಸಿ ಗಣ್ಯತೆಗೆ ಬಂದನು. ಆದರೆ ತಂದೆಯು ಮಾಡಿದ ಸಾಲದಿಂದ ಅವನು ಅಧಿಕ ಕಷ್ಟಕ್ಕೆ ಸಿಲುಕಿ ತಲ್ಲಣಿಸುತ್ತಿರಲು, ಆಗ ಮೈಸೂರರಸರು ಅವನಿಗೆ ವಿಶೇಷ ಸಾಲಕೊಟ್ಟು ಸಹಾಯ ಮಾಡಿದರು. ಈ ಉಪಕಾರಕ್ಕಾಗಿ ಸ್ವಾಮಿದ್ರೋಹಮಾಡದೆ ನಡೆದುಕೊಳ್ಳುವೆನೆಂದು ಪ್ರಮಾಣಮಾಡಿ ಹೈದರನು ಸೈನ್ಯಕ್ಕೆ ಸೇರಿ ನಂಬಿಕೆಯಿಂದ ಕೆಲಸಮಾಡಿಕೊಂಡಿದ್ದನು.

ಇಮ್ಮಡಿ ಕೃಷ್ಣರಾಜ ಪ್ರಭುಗಳು ಸರ್ವಾಧಿಕಾರಿಗಳನ್ನು ಅಡಗಿಸಿ ರಾಜ್ಯಾಧಿಕಾರವನ್ನು ಸ್ವತಃ ನಡೆಯಿಸಲಾರಂಭಿಸಿದರು. ಆಗ ಹೈದರಾಲಿಯು ಸೈನ್ಯಕ್ಕೆ ಅಧಿಪತಿಯಾಗಿ ಪ್ರಾಮಾಣಿಕತೆಯಿಂದ ಕೆಲಸಮಾಡುತ್ತ ಮಹಾರಾಜರ ವಿಶೇಷ ಪ್ರೀತಿಗೆ ಪಾತ್ರನಾದನು. ಪ್ರಭುಗಳು ಈ ಅಧಿಕಾರಿಯ ಸಹಾಯದಿಂದ ಸೈನ್ಯವನ್ನು ಬಲಪಡಿಸಿ ದೇಶವನ್ನು ಸರ್ವ ವಿಧದಿಂದಲೂ ಉತ್ತಮ ಸ್ಥಿತಿಗೆ ತರುವುದರಲ್ಲಿ ನಿರತರಾದರು. ಹೈದರಾಲಿಯೂ ದ್ರೋಹಚಿಂತನೆಯಿಲ್ಲದೆ ಪ್ರತಿಯೊಂದು ಕಾರ್ಯಮಾಡುವಾಗಲೂ ಮಹಾರಾಜರ ಅಪ್ಪಣೆ ಪಡೆದು ಶ್ರದ್ಧೆಯಿಂದ ಮಾಡುತ್ತ ಅಚ್ಚುಮೆಚ್ಚಾಗಿದ್ದನು. ಕ್ರಮ

ಕ್ರಮವಾಗಿ ಸೈನ್ಯವಿಚಾರ ಮಾತ್ರವೇ ಅಲ್ಲ; ರಾಜ್ಯಭಾರದ ಯಾವ ಸಂಗತಿಯೇ ಆಗಲಿ ಆತನ ತಿಳಿವಳಿಕೆಗೆ ಬಾರದೆ, ಆತನ ಸಲಹೆಯನ್ನು ಕೇಳದೆ, ಹೆಚ್ಚೇನು, ಆತನ ಅನುಮತಿಯಿಲ್ಲದೆ ತೀರ್ಮಾನವಾಗದ ಸ್ಥಿತಿಗೆ ಬಂದಿತು. ಹೀಗೆ ದಿನ ಕಳೆದಂತೆಲ್ಲ ಹೈದರನು ದೇಶದ ಸಕಲ ರಾಜಕಾರ್ಯ ಸೂತ್ರಗಳನ್ನೂ ಹಿಡಿದು ನಡೆಯಿಸುವ ಅಧಿಕಾರಿಯಾದನು. ದಕ್ಷತೆಯಿಂದ ಎಲ್ಲಾ ಕಾರ್ಯಗಳನ್ನೂ ನಿರ್ವಹಿಸುತ್ತ, ಆಗಾಗ ದಂಡೆತ್ತಿ ಬರುತ್ತಿದ್ದ ಮರಾಠಿ ಮತ್ತು ಮಹಮ್ಮದೀಯ ರಾಜರ ಸೈನ್ಯಗಳನ್ನು ಧೈರ್ಯದಿಂದ ಎದುರಿಸಿ ಓಡಿಸುತ್ತ ಇದ್ದ ಆತನ ವಿಚಾರದಲ್ಲಿ ಮಹಾರಾಜರು ಸುಪ್ರೀತರಾದರು. ಒಮ್ಮೆ ಸಕಲ ಸರದಾರರೂ ಪ್ರಜೆ ಪರಿವಾರವೂ ನೆರೆದಿದ್ದ ಸಭೆಯಲ್ಲಿ ಹೈದರಾಲಿಗೆ 'ನವಾಬ್ ಹೈದರಲ್ಲೀ ಖಾನ್ ಬಹದ್ದೂರ್' ಎಂಬ ಬಿರುದನ್ನು ಸಕಲ ಖಿಲ್ಲತ್ತುಗಳೊಡನೆ ಕೊಟ್ಟು ಗೌರವಿಸಿದರು.

ಆಗ ಶ್ರೀರಂಗಪಟ್ಟಣವೇ ಸೈನ್ಯದ ಠಾಣ್ಯವಾಗಿದ್ದುದರಿಂದ ಆತನು ಅಲ್ಲೇ ನೆಲಸಿ ಆ ಪಟ್ಟಣದ ಕೋಟೆಯನ್ನು ವಿಸ್ತಾರಗೊಳಿಸಿ ಬಂದೋಬಸ್ತಾಗಿ ಕಟ್ಟಿಸಿದನು. ತರುವಾಯ ಸುಶಿಕ್ಷಿತವಾಗಿದ್ದ ತನ್ನ ಆ ಸೈನ್ಯವನ್ನು ನಡೆಯಿಸಿಕೊಂಡು ಸೋದೆ, ಸವಣೂರು, ಘಟ್ಟದ ಕೆಳಗಿನ ಪ್ರಾಂತಗಳು, ಕಲ್ಲೀಕೋಟೆ ಮುಂತಾದ ಅನೇಕ ಪ್ರಾಂತಗಳ ಮೇಲೆ ದಂಡೆತ್ತಿಹೋಗಿ ಜಯಿಸಿ ಮೈಸೂರು ರಾಜ್ಯಕ್ಕೆ ಸೇರಿಸಿದನು. ದೇಶದ ಗಡಿಯು ಬಹು ದೂರದವರೆಗೆ ವಿಸ್ತರಿಸಿತು. ಹೀಗೆ ಹೊರಗಿನ ಶತ್ರುಗಳನ್ನು ಮಾತ್ರವೇ ಅಲ್ಲ, ದೇಶದೊಳಗಿದ್ದು ಆಗಾಗ ಬಾಧೆ ಕೊಡುತ್ತಿದ್ದ ಹಲವು ಮಂದಿ ಪಾಳೆಯಗಾರರ ಸೊಕ್ಕನ್ನೂ ಅಡಗಿಸಿ ವಿಧೇಯರನ್ನಾಗಿ ಮಾಡಿಕೊಂಡನು. ಹೀಗೆ ದೇಶವು ಆ ಕಾಲದಲ್ಲಿ ಬಹು ಅಭಿವೃದ್ಧಿ ಸ್ಥಿತಿಗೆ ಬಂದು ಎಡಬಲದ ಸೀಮೆಗಳಲ್ಲಿ ಗಣ್ಯತೆಯನ್ನು ಹೊಂದಿತು.

ಮಹಾರಾಜರಿಗೆ ಲಕ್ಷ್ಮಮ್ಮಣ್ಣಿಯವರೊಂದಿಗೆ ವಿವಾಹವಾಗಿ ಆರು ವರ್ಷಗಳು ಮಾತ್ರ ಕಳೆದಿದ್ದುವು. ಮಹಾರಾಣಿಯವರ ಸಂಸಾರ ನೌಕೆಯು ಇನ್ನೂ ಮಧ್ಯಸಮುದ್ರದಲ್ಲೇ ಪ್ರಯಾಣಮಾಡುತ್ತಿತ್ತು. ಆಗಲೇ ಕ್ರೂರ ವಿಧಿಯು ಇಮ್ಮಡಿ ಪ್ರಭುಗಳನ್ನು ಸೆಳೆದೊಯ್ದನು. ಮಹಾರಾಣಿಯವರು ಮುಂದೇನು ಮಾಡಬೇಕೆಂದು ತೋರದೆ ಅಗಾಧ ದುಃಖದ ಕಡಲಿನಲ್ಲಿ ಮುಳುಗಿದರು. ಆ ಸಂದರ್ಭದಲ್ಲಿ ನವಾಬನು ಕಲ್ಲೀಕೋಟೆಯ ಮೇಲೆ

ದಂಡೆತ್ತಿ ನಡೆದಿದ್ದನು. ಅಲ್ಲಿಗೆ ಈ ದಾರುಣವಾದ ವಾರ್ತೆಯು ತಲಪಿದೊಡ ನೆಯೇ ಆತನು ಶ್ರೀರಂಗಪಟ್ಟಣದ ಕಿಲ್ಲೇದಾರನಾಗಿದ್ದ ಮೊಖದುಂಸಾಬ್ ಎಂಬಾತನಿಗೆ "ಈ ಕೂಡಲೇ ರಾಜಧಾನಿಗೆ ಹೋಗಿ ಮಹಾ ಮಾತೃಶ್ರೀ ಗಳವರಿಗೆ ನನ್ನ ಪರವಾಗಿ ಸಮಾಧಾನೋಕ್ತಿಗಳನ್ನು ಹೇಳು. ಅರಮನೆಯ ಶಾಸ್ತ್ರಸಂಪ್ರದಾಯಗಳನ್ನನುಸರಿಸಿ ಮಹಾರಾಜರ ಉತ್ತರಕ್ರಿಯೆಗಳನ್ನು ನಡೆಯಿಸಲು ಅನುಕೂಲಪಡಿಸು. ತರುವಾಯ ಶ್ರೀ ಚೆಲುವಾಜಮ್ಮಣ್ಣಿ ಯವರ ಅಪ್ಪಣೆಯ ಮೇರೆಗೆ ಚಿಕ್ಕ ದೊರೆಗಳವರಿಗೆ ಪಟ್ಟಾಭಿಷೇಕ ಮಾಡಿಸು" ಎಂದು ಬರೆಸಿ ಕಳುಹಿಸಿದನು. ನವಾಬನ ಅಪ್ಪಣೆಯಂತೆ ಎಲ್ಲಾ ಕೆಲಸಗಳೂ ನಡೆದು ರಾಜಪುತ್ರರಾದ ನಂಜರಾಜ ಒಡೆಯರಿಗೆ ಪಟ್ಟಾಭಿಷೇಕ ಮಹೋ ತ್ಸವವು ವಿಜೃಂಭಣೆಯಿಂದ ನೆರವೇರಿತು.

ಪಟ್ಟಾಭಿಷಿಕ್ತರಾದಾಗ ರಾಜಕುಮಾರರಿಗೆ ಇನ್ನೂ ನಾಲ್ಕೇ ವರ್ಷ ವಯಸ್ಸು. ಆದರೂ ಮುಂದೆ ಅವರು ಜೀವಿಸಿದ್ದುದು ನಾಲ್ಕು ವರ್ಷ ಮಾತ್ರ. ರಾಜಸಿಂಹಾಸನವು ಪುನಃ ಬರಿದಾಯಿತು. ಆಗ ಹೈದರಲ್ಲೀಖಾನನು ಮಹಾ ರಾಣಿ ಲಕ್ಷ್ಮಮ್ಮಣ್ಣಿಯವರ ಅಪ್ಪಣೆಯ ಮೇರೆಗೆ ದೊಡ್ಡ ಚಾಮರಾಜ ಒಡೆಯರೆಂಬುವರಿಗೆ ಪಟ್ಟಾಭಿಷೇಕ ಮಾಡಿಸಿದನು. ಪಟ್ಟವಾಗುವಾಗ ಅವ ರಿಗೂ ಕೇವಲ ಹತ್ತೇವರ್ಷ ವಯಸ್ಸು. ಅವರೂ ಮುಂದೆ ಆರು ವರ್ಷಗಳ ವರೆಗೆ ಮಾತ್ರ ಜೀವಿಸಿದ್ದು ಕಾಲವಶವಾದರು. ಹೀಗೆ ಈ ಇಬ್ಬರೂ ವಯಸ್ಸಿಗೆ ಬಾರದೆಯೂ, – ಆದ್ದರಿಂದ ಹೆಂಡತಿ ಮಕ್ಕಳಿಲ್ಲದೆಯೂ ಮೃತಪಟ್ಟದ್ದರಿಂದ ಈ ದೀರ್ಘಕಾಲದಲ್ಲಿ ಮೈಸೂರು ದೇಶದ ಆಡಳಿತವು ಸಂಪೂರ್ಣವಾಗಿ ಹೈದರಲ್ಲೀಖಾನನ ಕೈಯಲ್ಲೇ ನಿಂತಿತು. ಈ ಕಾರಣದಿಂದ ಸ್ವಾಭಾವಿಕವಾಗಿ ದಿನ ದಿನಕ್ಕೆ ಆತನ ಪ್ರಾಬಲ್ಯ ಹೆಚ್ಚತೊಡಗಿತು.

ದೇಶದಲ್ಲಿ ನವಾಬನ ಅಧಿಕಾರ ಆಡಳಿತಗಳು ಹೆಚ್ಚಿದಂತೆಲ್ಲ, ಇತ್ತ ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಚಿಂತೆಯೂ ಹೆಚ್ಚತೊಡಗಿತು. ರಾಜ ಪುತ್ರರಿಬ್ಬರ ಮರಣದಿಂದ ಸಿಂಹಾಸನವು ಬರಿದಾಗಿದೆ; ತಮಗೆ ಸಂತಾನವಿಲ್ಲ; ರಾಜ್ಯಕ್ಕೆ ದಿಕ್ಕಾಗಿ ರಾಜವಂಶದಲ್ಲಿ ಮತ್ತಾವ ಗಂಡು ಸಂತತಿಯೂ ಇಲ್ಲ; ದಿನೇ ದಿನೇ ದೇಶದಲ್ಲಿ ನವಾಬನ ಪ್ರಾಬಲ್ಯವು ಅಳತೆಗೆ ಮೀರಿ ಬೆಳೆಯುತ್ತಿದೆ; ರಾಜವಂಶವನ್ನು ನಾಮಮಾತ್ರವಾಗಿಟ್ಟು, ಸಕಲ ಕಾರ್ಯಭಾರಗಳನ್ನೂ



ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರವರು.

[ಪುಟ ೧೦೮



ಶ್ರೀಚಾಮರಾಜೇಂದ್ರ ಒಡೆಯರವರು - ಮಕ್ಕಳೊಂದಿಗೆ.

[ಪುಟ ೧೦೦

ಅಧಿಕಾರಿಗಳೇ ನಿರಂಕುಶವಾಗಿ ನಡೆಯಿಸುತ್ತಿದ್ದಾರೆ; ಹೀಗೆಯೇ ಕೆಲ ವರ್ಷಗಳು ಸಾಗಿದರೆ ಮುಂದೆ ರಾಜವಂಶದ ನಾಮಾವಶೇಷವಾಗುವುದೋ ಎಂಬ ಸೂಚನೆ ತೋರುತ್ತಿದೆ; ಈ ಸಂಗತಿಗಳೆಲ್ಲ ಶ್ರೀ ಲಕ್ಷ್ಮಮ್ಮಣ್ಣಿಯವರ ಮನಸ್ಸಿಗೆ ಬಂದು ಬಹು ತಾಪವನ್ನುಂಟುಮಾಡಿದುವು ಈ ದುಃಸ್ಥಿತಿಯನ್ನು ನಿವಾರಿಸಲು ಶೀಘ್ರವಾಗಿ ಏನಾದರೊಂದು ಪ್ರಯತ್ನ ಮಾಡಬೇಕು; ಇಲ್ಲದಿದ್ದರೆ ಮುಂದೆ ರಾಜವಂಶಕ್ಕೆ ರಾಜ್ಯಾಧಿಕಾರವು ದಕ್ಕುವುದೇ ಸಂಶಯವಾದೀತು, ಎಂದು ಆಕೆಯ ಮನಸ್ಸಿಗೆ ನಿಶ್ಚಯವಾಯಿತು.

ಆಗ ಆಕೆಯು, ಔರಸ ಸಂತತಿಯಿಲ್ಲದ ರಾಜವಂಶಕ್ಕೆ ದತ್ತುಸ್ವೀಕಾರದಿಂದಲಾದರೂ ಒಂದು ಗತಿಯನ್ನು ಕಲ್ಪಿಸಬೇಕೆಂದು ಯೋಚಿಸಿದರು. ತಮ್ಮ ಬಂಧುಗಳಲ್ಲೇ ಇದ್ದ ಇಬ್ಬರು ಹುಡುಗರಲ್ಲಿ ಯಾವನಾದರೊಬ್ಬ ಬಾಲಕನನ್ನು ತಮ್ಮ ವಂಶಕ್ಕೆ ದತ್ತು ತೆಗೆದುಕೊಳ್ಳೋಣವೆಂದು ಆಕೆಗೆ ತೋರಿತು. ಆದರೆ ಕೇವಲ ರಾಜ್ಯವಿಚಾರ ಮಾತ್ರವಲ್ಲ, ಅರಮನೆಗೆ ಸಂಬಂಧಿಸಿದ ವಿಚಾರವೂ ಸಹ ಹೈದರಾಲಿಯ ಗಮನಕ್ಕೆ ಬಾರದೆ, ಆತನ ಅಪ್ಪಣೆಯಾಗದೆ ತೃಣಮಾತ್ರವೂ ನಡೆಯುವಂತಿರಲಿಲ್ಲ. ಆದ್ದರಿಂದ ಮಹಾರಾಣಿಯವರು ತಮ್ಮ ಪರಾಧೀನತೆಗಾಗಿ ವ್ಯಸನಪಡುತ್ತ ಆ ಸಂಗತಿಯನ್ನು ಆತನಿಗೆ ತಿಳಿಸಿದರು. ಆಗ ನವಾಬನು ಹೇಳಿ ಕಳುಹಿಸಿದ ಮಾತುಗಳು ಗಮನಾರ್ಹವಾಗಿವೆ.

"ತಾಯೀ, ಸರ್ವೋತ್ತಮವಾದ ತಮ್ಮ ವಂಶವು ಯೋಗ್ಯರಾದ ಪುತ್ರರಿಂದ ಪ್ರಕಾಶ ಪಡೆಯಬೇಕೇ ಹೊರತು ಬೇರೆಯಲ್ಲ ತಮ್ಮ ವಂಶದಲ್ಲಿ ಬಂದ ಹಿಂದಿನವರೆಲ್ಲರೂ ಆಸೇತುಹಿಮಾಚಲವಾಗಿ ಪ್ರಸಿದ್ಧರಾಗಿಯೂ, ಮಹಾ ಪರಾಕ್ರಮಶಾಲಿಗಳಾಗಿಯೂ ಮಹಾ ದಾತೃಗಳಾಗಿಯೂ ಧರ್ಮದಲ್ಲಿಯೇ ಆಸಕ್ತರಾಗಿಯೂ ಇದ್ದ ಕಾರಣ, ತಾವು ಅವೇ ಸದ್ಗುಣಗಳುಳ್ಳ ಪುತ್ರರನ್ನು ಪರೀಕ್ಷಿಸಿ ಸ್ವೀಕಾರ ಮಾಡಿಕೊಂಡು ಪಟ್ಟವನ್ನು ಕಟ್ಟಬೇಕು .......ಧೈರ್ಯೌದಾರ್ಯಾದಿ ಸುಗುಣಗಳುಳ್ಳ ರಾಜವಂಶದ ಬಾಲಕರುಗಳನ್ನು ಕರೆಯಿಸಿ, ಅವರುಗಳ ಪರೀಕ್ಷೆಯನ್ನು ಮಾಡುವ ಕಾಲದಲ್ಲಿ, ಈ ಸಂಸ್ಥಾನಕ್ಕೆ ಮುಖ್ಯಾಭಿಮಾನಿ ದೇವತೆಯಾದ ಶ್ರೀ ಚಾಮುಂಡೇಶ್ವರೀ ಅಮ್ಮನವರು ಯಾರ ಪೂರ್ವ ಪುಣ್ಯ ಪ್ರಭಾವದಿಂದ ಅವರಲ್ಲಿ ಕಟಾಕ್ಷವನ್ನಿಡುವರೋ ಅಂಥವರೇ ರಾಜ್ಯ ಪದವಿಗೆ ಯೋಗ್ಯರಾಗಿರುವರು. ಅವರ ಬುದ್ಧಿಶಕ್ತಿಯನ್ನೂ ಪರೀಕ್ಷೆಮಾಡಿ,

ಅವರನ್ನು ಸ್ವೀಕಾರ ಮಾಡಿಕೊಂಡು ಪಟ್ಟ ಕಟ್ಟಬೇಕು" ಎಂದು ಬಿನ್ನವಿಸಿದನು. ನವಾಬ ಹೈದರಾಲಿಯು ಹೇಳಿದ ಯುಕ್ತಿಯುಕ್ತವಾದ ಈ ಮಾತುಗಳಿಗೆ ಬದಲು ಹೇಳುವುದು ಸಾಧ್ಯವಾಗಲಿಲ್ಲ ಆದರೂ ತಮ್ಮ ಉದ್ದೇಶವು ನೆರವೇರಲಿಲ್ಲವಲ್ಲಾ, ತಮ್ಮ ಸಂಬಂಧಿಗಳಲ್ಲೇ ದತ್ತುಮಾಡಿಕೊಳ್ಳಲು ಅವಕಾಶವಾಗಲಿಲ್ಲವಲ್ಲಾ ಎಂದು ಮರುಗಿ ಮಹಾರಾಣಿಯವರು ಉಪಾಯವಿಲ್ಲದೆ, "ರಾಜವಂಶದ ಕ್ಷೇಮಚಿಂತನೆಯನ್ನು ಗಮನದಲ್ಲಿಟ್ಟುಕೊಂಡು, ಹೇಗೆ ಸೂಕ್ತವೋ ಹಾಗೆಮಾಡಿ, ಉತ್ತಮ ರಾಜಪುತ್ರನನ್ನು ದತ್ತುಮಾಡಿಸಬೇಕು" ಎಂದು ಹೇಳಿ ಕಳುಹಿಸಿದರು.

ಒಡನೆಯೇ ಹೈದರಾಲಿಯು ಶ್ರೀರಂಗಪಟ್ಟಣಕ್ಕೆ ನಡೆದು ಅಲ್ಲಿ ತನ್ನ ಅರಮನೆಯ ಸಭಾಂಗಣದಲ್ಲೇ ಒಂದು ದೊಡ್ಡ ಸಭೆಯನ್ನು ಏರ್ಪಡಿಸಿದನು. ಆ ಸಭಾಂಗಣದ ಒಂದೆಡೆಯಲ್ಲಿ ಖರ್ಜೂರ ದ್ರಾಕ್ಷಿ ಕಲ್ಲುಸಕ್ಕರೆ ಬಾದಾಮಿ ಮಿಠಾಯಿ ಮುಂತಾದ ತಿಂಡಿಯ ಪದಾರ್ಥಗಳನ್ನೂ ಇನ್ನೊಂದೆಡೆಯಲ್ಲಿ ನಾನಾ ಬಗೆಯ ಆಟದ ಸಾಮಾನುಗಳನ್ನೂ ಮತ್ತೊಂದು ಸ್ಥಳದಲ್ಲಿ ಕನ್ನಡಿ ಕಠಾರಿ ಕತ್ತಿ ಬಾಕು ಮುಂತಾದ ಆಯುಧ ಸಾಮಗ್ರಿಗಳನ್ನೂ ಇರಿಸಿದ್ದನು. ರಾಜವಂಶಕ್ಕೆ ಹತ್ತಿರದ ಮತ್ತು ದೂರದ ಸಂಬಂಧಿಗಳಾದ ಎಲ್ಲಾ ರಾಜಪುತ್ರರನ್ನೂ ಕರೆಯಿಸಿದನು. ಅವರಲ್ಲಿ ಯಾರಿಗೆ ಯಾವ ಪದಾರ್ಥವು ಇಷ್ಟವಾಗುವುದೋ ಅವರು ಅದನ್ನು ತೆಗೆದುಕೊಳ್ಳಲೆಂದು ಅಷ್ಟುಮಂದಿ ಬಾಲಕರನ್ನೂ ಸ್ವೇಚ್ಛೆಯಾಗಿ ಬಿಟ್ಟುಬಿಟ್ಟನು. ಆ ಬಾಲಕರು ಸಭಾಂಗಣದಲ್ಲಿ ಪ್ರವೇಶಿಸಿ ಮನ ಬಂದೆಡೆಗೆ ನಡೆದು ತಮಗೆ ಇಷ್ಟಬಂದ ತಿಂಡಿಯ ಸಾಮಾನುಗಳು ಬಟ್ಟೆಬರೆಗಳು ಆಟದ ಸಾಮಾನುಗಳು ಹೀಗೆ ತಮಗೆ ಬೇಕೆಂದು ತೋರಿದ ಸಾಮಾನುಗಳನ್ನು ತೆಗೆದುಕೊಂಡರು. ಅವರಲ್ಲಿ ದೇವಿ ಶ್ರೀ ಚಾಮುಂಡೇಶ್ವರಿಯ ಕೃಪಾಕಟಾಕ್ಷಕ್ಕೆ ಪಾತ್ರನೂ, ಪೂರ್ವಪುಣ್ಯದಿಂದ ರಾಜ ಸಿಂಹಾಸನಕ್ಕೆ ಬಾಧ್ಯನೂ ಆಗಿದ್ದ ಅರಿಕುಠಾರದ ದೇವರಾಜ ಅರಸಿನವರ ಮತ್ತು ಹೊನ್ನಾಜಮ್ಮಣ್ಣಿಯವರ ಮೂರು ವರ್ಷದ ಚಿಕ್ಕಮಗುವು, ಎದ್ದು ಗಂಭೀರವಾದ ನಡಿಗೆಯಿಂದ ನೇರವಾಗಿ ಹೋಗಿ ಅಲ್ಲಿದ್ದ ಕಠಾರಿಯನ್ನೂ ಕನ್ನಡಿಯನ್ನೂ ಕೈಯಿಂದ ಎತ್ತಿಕೊಂಡಿತು. ಅದನ್ನು ನೋಡಿ ಅಲ್ಲಿದ್ದವರೆಲ್ಲರೂ ಪರಮಾಶ್ಚರ್ಯಪಟ್ಟರು. ಅಷ್ಟು ಚಿಕ್ಕಮಗುವು ತಿಂಡಿಯ ಸಾಮಾನು

ಬಟ್ಟೆ ಬರೆ, ಆಟದ ಸಾಮಾನುಗಳು, ಇವು ಯಾವುವನ್ನೂ ಕಣ್ಣೆತ್ತಿ ನೋಡದೆ ತನ್ನ ವಯಸ್ಸಿಗೆ ಏನೂ ಸಂಬಂಧಿಸದ ಆ ಕಠಾರಿ ಕನ್ನಡಿಗಳನ್ನು ಎತ್ತಿ ಕೊಂಡುದು ಆಶ್ಚರ್ಯವೆನ್ನಿಸಿತು. ಆ ಬಾಲಕನ ಮೇಲೆಯೇ ದೈವಾನುಗ್ರಹ ವಿದ್ದು ಆತನೇ ಸಿಂಹಾಸನಕ್ಕೆ ಪ್ರಭುವಾಗಬಹುದೋ ಎಂದು ಎಲ್ಲರೂ ಹೇಳಿ ಕೊಂಡರು. ಹೈದರಲ್ಲೀ ಖಾನನು, ಆ ಮಗುವಿನ ಮುಖ ವರ್ಚಸ್ಸು, ನಡಿಗೆ, ಗಾಂಭೀರ್ಯ, ದೃಷ್ಟಿ ಇವುಗಳನ್ನೂ ಆ ಮಗುವು ಮತ್ತಾವ ಕ್ಷುದ್ರವಸ್ತು ವನ್ನೂ ಗಮನಿಸದೆ ಕಠಾರಿ ಕನ್ನಡಿಗಳನ್ನೇ ಎತ್ತಿಕೊಂಡುದನ್ನೂ ನೋಡಿ ಎಲ್ಲರಂತೆ ತಾನೂ ಆಶ್ಚರ್ಯಪಟ್ಟು, 'ಇಗೋ! ಇವರೇ ಮೈಸೂರು ದೊರೆ ಗಳು; ನಮ್ಮ ಪ್ರಭುಗಳು' ಎಂದು ನುಡಿದನು. ಒಡನೆಯೇ ಆ ಮಗುವನ್ನು ಅಲ್ಲೇ ಸಿದ್ಧಪಡಿಸಿಟ್ಟಿದ್ದ ದಿವ್ಯ ಗದ್ದುಗೆಯ ಮೇಲೆ ಕೂರಿಸಿದರು. ನವಾಬನು ಹೂವಿನ ಹಾರವನ್ನು ಆ ಮಗುವಿನ ಕೊರಳಲ್ಲಿ ಹಾಕಿ ಗಂಧಪುಷ್ಪ ತಾಂಬೂಲ ಗಳನ್ನು ಒಪ್ಪಿಸಿ ಮುಜರೇ ಮಾಡಿದನು. ಸಭೆಯಲ್ಲಿದ್ದ ಸಮಸ್ತರೂ ಮುಜರೆ ಮಾಡಿ ಗೌರವಿಸಿದರು. ಖಾಸಾ ಚಾಮರಾಜರೆಂದು ಹೆಸರಿಟ್ಟು, ಆ ಮಗು ವನ್ನು ಲಕ್ಷ್ಮಮ್ಮಣ್ಣಿಯವರು ದತ್ತುಮಾಡಿಕೊಂಡರು. ಮುಂದೊಂದು ಶುಭ ದಿನದಲ್ಲಿ ಇವರಿಗೇ ಶಾಸ್ತ್ರೋಕ್ತವಾಗಿ ಪಟ್ಟಾಭಿಷೇಕವಾಯಿತು.

ಮುಂದೆ ದಿನ ದಿನಕ್ಕೂ ಹೈದರಲ್ಲಿಯ ಪ್ರಾಬಲ್ಯವು ಹೆಚ್ಚತೊಡಗಿತು. ಆತನ ಅಧಿಕಾರವು ಮೇಲೆ ಹೇಳಿದಂತೆ ರಾಜ್ಯವಿಚಾರದಲ್ಲಿ ಮಾತ್ರವಲ್ಲ, ಅರಮನೆಯೊಳಕ್ಕೂ ಹೆಚ್ಚುಹೆಚ್ಚಾಗಿ ವ್ಯಾಪಿಸತೊಡಗಿತು. ತಾನು ಮಾಡಿಸಿದ ದತ್ತುವಿಧಾನವು ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಮನಸ್ಸಿಗೆ ಒಪ್ಪಿಗೆಯಾಗ ಲಿಲ್ಲವೆಂದು ಮಹಾ ಚಾಣಾಕ್ಷನಾದ ಆತನಿಗೆ ತಿಳಿದುಹೋಯಿತು. ಈ ಕಾರಣ ದಿಂದ ದತ್ತುಪುತ್ರನಾದ ಆ ರಾಜಕುಮಾರನಿಗೆ ಲಕ್ಷ್ಮಮ್ಮಣ್ಣಿಯವರು ಏನಾದರೂ ಅಪಾಯವನ್ನುಂಟು ಮಾಡಬಹುದೆಂದು ಯೋಚಿಸಿ ರಾಜಪುತ್ರ ನನ್ನು ಅವರ ಪೋಷಣೆಯಿಂದ ತಪ್ಪಿಸಿದನು. ಆಕೆಯು ಮುಂದೆ ಅರಮನೆಯ ನಾಟಕಶಾಲೆಯ ಬೊಕ್ಕಸದ ತೊಟ್ಟಿಯಲ್ಲಿ ವಾಸಮಾಡಿಕೊಂಡಿರಬೇಕೆಂದು ಏರ್ಪಾಟು ಮಾಡಿದನು.

ತರುವಾಯ ಹೈದರನು ರಾಜಕಾರ್ಯಗಳಿಗಾಗಿಯಾದರೂ ಮಹಾರಾಣಿ ಯವರ ಅನುಮತಿಯನ್ನು ಕೇಳುವುದು ಕಡಮೆಯಾಯಿತು; ಸಕಲ ರಾಜ

ಕಾರ್ಯಗಳನ್ನೂ ಸರ್ವ ಸ್ವಾತಂತ್ರ್ಯದಿಂದ ತಾನೇ ನಿರ್ವಹಿಸತೊಡಗಿದನು; ಸೈನ್ಯವನ್ನು ವಿಶೇಷವಾಗಿ ಶೇಖರಿಸಿ ಬಲಪಡಿಸಿ ಅವರ ಸಹಾಯದಿಂದ ಸುತ್ತ ಮುತ್ತಲಿನ ಅನೇಕ ದೇಶಗಳ ಮೇಲೆ ದಂಡೆತ್ತಿ ನಡೆದು ಸ್ವಾಧೀನಪಡಿಸಿ ಕೊಳ್ಳುತ್ತಿದ್ದನು. ಧನಬಲ ಜನಬಲಗಳು ದಿನ ದಿನಕ್ಕೆ ಹೆಚ್ಚಿ ಆತನು ಯಾರ ಲಕ್ಷ್ಯವೂ ಇಲ್ಲದೆ ಪ್ರಬಲರಾದ ಚಿತ್ರದುರ್ಗ ಕಡಪೆ ಮುಂತಾದ ದುರ್ಗಗಳ ಅಧಿಪತಿಗಳನ್ನೂ ಎದುರಿಸಿ ಜಯಿಸಿದನು. ಆ ಕಾಲದಲ್ಲಿ ಆತನ ಸೈನ್ಯದಲ್ಲಿ ೩೯,೦೦೦ ಕುದುರೆ ಸವಾರರೂ, ೬೪,೦೦೦ ಬಾರಿನವರೂ, ೧,೦೪,೦೦೦ ಓಲೇ ಕಾರರೂ ಮತ್ತು ಮಿಕ್ಕಸೈನಿಕರೂ ಸೇರಿ, ಒಟ್ಟು ೨,೨೬,೦೦೦ ಸೈನ್ಯವಿತ್ತೆಂದು ಪ್ರಕಟವಾಗಿದೆ. ಇಂತಹ ಅಪಾರವಾದ ಸೈನ್ಯದ ಸಹಾಯದಿಂದ, ನವಾಬ್ ಹೈದರಲ್ಲಿಯು ಉತ್ತರದಲ್ಲಿ ಕೃಷ್ಣಾನದಿ, ಗದ್ವಾಲ, ಪೂನಾ ಪಟ್ಟಣಗಳವರೆಗೂ ದಕ್ಷಿಣದಲ್ಲಿ ರಾಮೇಶ್ವರದವರೆಗೂ ಮೈಸೂರು ರಾಜ್ಯವನ್ನು ವಿಸ್ತರಿಸಿಬಿಟ್ಟನು. ಆಗ ಒಟ್ಟು ೩೬೩ ಗಡಿಗಳು ಮೈಸೂರು ರಾಜ್ಯಾಡಳಿತಕ್ಕೆ ಒಳಪಟ್ಟಿದ್ದವು. ರಾಜ್ಯಾದಾಯವು ಎರಡು ಕೋಟಿ ಮೂವತ್ತು ಲಕ್ಷ ವರಹಗಳಾಗಿತ್ತು.

ರಾಜ್ಯವು ಅಷ್ಟುಮಟ್ಟಿನ ವಿಸ್ತಾರಹೊಂದಿ ಅಭಿವೃದ್ಧಿ ಸ್ಥಿತಿಯಲ್ಲಿದ್ದಿ ತಾದರೂ, ರಾಜ್ಯಕ್ಕೆ ನಿಜವಾಗಿ ಬಾಧ್ಯಸ್ಥರಾಗಿದ್ದ ರಾಜವಂಶೀಕರಿಗೆ ಮಾತ್ರ ದಿನ ದಿನಕ್ಕೆ ನಿರ್ಬಂಧಗಳೂ ಹಿಂಸೆ ಕಿರುಕುಳಗಳೂ ಹೆಚ್ಚುತ್ತ ಹೋದುವು. ಈ ಸ್ಥಿತಿಯನ್ನು ಮಹಾರಾಣಿಯವರು ಚೆನ್ನಾಗಿ ಕಣ್ಣುಬಿಟ್ಟು ನೋಡಿ, ಈ ದುಃಸ್ಥಿತಿಯಿಂದ ಪಾರಾಗಲು ಒಡನೆ ಏನಾದರೊಂದು ಉಪಾಯ ಮಾಡ ದಿದ್ದರೆ ಮುಂದೆ ರಾಜವಂಶವು ಹೆಸರಿಲ್ಲದಂತೆ ಆಗಬಹುದೆಂದು ಹೆದರಿದರು; ಮದರಾಸ್ ಪಟ್ಟಣದಲ್ಲಿದ್ದ ಇಂಗ್ಲಿಷ್ ಗೌರ್ನರನೊಂದಿಗೆ ಪತ್ರವ್ಯವಹಾರ ನಡೆ ಯಿಸಿ, ಆ ಮೂಲಕ ಸಹಾಯಪಡೆಯಬೇಕೆಂದು ಯೋಚಿಸಿದರು. ರಾಜ್ಯವು ತಮ್ಮ ಕೈತಪ್ಪಿ ಹೋಗದಂತೆ ದಕ್ಕಿಸಿಕೊಳ್ಳಲು ಅದು ಹೊರತು ಬೇರೆ ಮಾರ್ಗವೇ ಇಲ್ಲವೆಂದು ಆಕೆಗೆ ಮನವರಿಕೆಯಾಯಿತು. ಆ ಕಾರ್ಯವನ್ನು ನಿರ್ವಹಿಸಲು ತಿರುಮಲರಾಯ ಮತ್ತು ಕೃಷ್ಣರಾಯ ಎಂಬಿಬ್ಬರು ಬ್ರಾಹ್ಮಣ ವಕೀಲರನ್ನು ತಮ್ಮ ಪರವಾಗಿ ಮದರಾಸಿಗೆ ಕಳುಹಿಸಿದರು.

ಅಂತಃಪುರವನ್ನು ಬಿಟ್ಟು ಹೊರಕ್ಕೆ ಬಂದರಿಯದ ಒಬ್ಬ ರಾಜಸ್ತ್ರೀಯು ರಾಜ್ಯದಲ್ಲಿ ಹೆಚ್ಚಿಹೋಗುತ್ತಿದ್ದ ಶತ್ರುಗಳ ಪ್ರಾಬಲ್ಯವನ್ನು ತಗ್ಗಿಸಲು

ಕೈಕೊಂಡ ಈ ಸಾಹಸಕಾರ್ಯವು ನಿಜವಾಗಿ ಪ್ರಶಂಸೆಗೆ ಅರ್ಹವಾಗಿದೆ. ಆ ಕಾಲದಲ್ಲಿ ಮಹಾರಾಣಿಯವರು ಮದರಾಸಿನಲ್ಲಿದ್ದ ತಮ್ಮ ಆ ಬ್ರಾಹ್ಮಣ ವಕೀಲರಿಗೆ ಬರೆಯಿಸಿ ಕಳುಹಿಸುತ್ತಿದ್ದ ಕಾಗದಗಳನ್ನು ನೋಡಿದರೆ ಆಕೆಗೆ ರಾಜಕಾರ್ಯದಲ್ಲಿ ಎಷ್ಟುಮಟ್ಟಿನ ಅನುಭವವಿದ್ದಿತೆಂಬುದನ್ನು ತಿಳಿಯಬಹುದಾಗಿದೆ. ಆ ಪತ್ರಗಳಲ್ಲಿ ಆಕೆಯು ತಮ್ಮ ವಕೀಲರಿಗೆ ಇಂಗ್ಲಿಷ್ ಗೌರ್ನರನನ್ನು ಸಂಧಿಸಿ, ರಾಜ್ಯಪ್ರಾಪ್ತಿಗೆ ಸಾಧಕವಾದ ಸಕಲ ವಿಚಾರಗಳನ್ನೂ ಆತನೊಡನೆ ಚರ್ಚಿಸಬೇಕೆಂದೂ ತಮ್ಮ ಕಡೆಯ ಪ್ರತಿನಿಧಿಯಾಗಿ ಸಮಯಾನುಸಾರವಾಗಿ ಆವಶ್ಯಕವೆನ್ನಿಸಿದಂತೆ ಸಂಧಿಮಾಡಿಕೊಳ್ಳಬಹುದೆಂದೂ ಸೂಚಿಸಿದ್ದಾರೆ. ಇಂಗ್ಲಿಷಿನವರು ಸೈನ್ಯದೊಡನೆ ದಂಡೆತ್ತಿ ಬಂದಲ್ಲಿ ಅವರ ಖರ್ಚುವೆಚ್ಚಗಳಿಗಾಗಿ ಒಂದು ಕೋಟಿ ರೂಪಾಯಿಗಳನ್ನೂ, ದರ್ಬಾರು ಖರ್ಚಿಗಾಗಿ ಮೂರು ಲಕ್ಷ ರೂಪಾಯಿಗಳನ್ನೂ ಕೊಡಿಸುವುದಾಗಿ ಭರವಸೆ ಕೊಟ್ಟಿದ್ದಾರೆ. ಸರ್ವವಿಧದಿಂದಲೂ, ಭಗೀರಥ ಪ್ರಯತ್ನಮಾಡಿ ಎಂತೂ ಆ ಕಾರ್ಯವನ್ನು ಸಾಧನೆಮಾಡಿ ರಾಜವಂಶಕ್ಕೆ ಸ್ವಾತಂತ್ರ್ಯವನ್ನು ದೊರಕಿಸಿ ಕೊಡಿರೆಂದು ತಮ್ಮ ಆ ವಕೀಲರನ್ನು ಪ್ರೋತ್ಸಾಹಗೊಳಿಸಿದ್ದಾರೆ.

ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಪತ್ರದಂತೆ ತಿರುಮಲರಾಯ ಸೋದರರು ಇಂಗ್ಲಿಷ್ ಸರ್ಕಾರದ ಪ್ರತಿನಿಧಿಯನ್ನು ಕಂಡು ಪ್ರಸ್ತಾಪಿಸಿದರು. ಆದರೆ ಒಂದು ತೀರ್ಮಾನಕ್ಕೆ ಬರುವ ವೇಳೆಗೆ ಕಂಪೆನಿಯವರು ಏನೋ ಕಾರಣಕ್ಕಾಗಿ ಆ ಪ್ರತಿನಿಧಿಯನ್ನು ಹಿಂದಕ್ಕೆ ಕರೆಯಿಸಿಕೊಂಡರು. ಆದಕಾರಣ ಆವರೆಗೆ ಮಾಡಿದ ಪ್ರಯತ್ನವೆಲ್ಲ ನಷ್ಟವಾಗಿ ಹೋಗಲು, ಹೊಸದಾಗಿ ಬಂದ ಅಧಿಕಾರಿಯನ್ನು ಪರಿಚಯಮಾಡಿಕೊಂಡು ಆತನೊಂದಿಗೆ ಪುನಃ ಪ್ರಾರಂಭಿಸಿದರು. ಇತ್ತ ಹೈದರನ ಪ್ರಾಬಲ್ಯವು ದಿನದಿನಕ್ಕೆ ಹೆಚ್ಚುತ್ತಲೇ ಇತ್ತು. ಒಮ್ಮೆ ಆತನು ತನ್ನ ಅಪಾರವಾದ ಸೈನ್ಯಬಲದೊಂದಿಗೆ ಮದರಾಸಿನ ಮೇಲೆ ದಂಡೆತ್ತಿ ನಡೆದು ಇಂಗ್ಲಿಷರನ್ನು ಈ ದೇಶದಿಂದಲೇ ಓಡಿಸಬೇಕೆಂದು ಪ್ರಯತ್ನಿಸಿದನು. ಅವನ ಈ ಪ್ರಯತ್ನವನ್ನು ಕಂಡ ಇಂಗ್ಲಿಷರು ಪ್ರಬಲನಾದ ಆ ಶತ್ರುವನ್ನು ಸಮೀಪದಲ್ಲಿಟ್ಟುಕೊಂಡು ಉದಾಶೀನತೆಯಿಂದ ಇರುವುದು ಕ್ಷೇಮವಲ್ಲವೆಂದು ಯೋಚಿಸಿದರು. ತಾವೇ ಪ್ರಯತ್ನಿಸುವುದಕ್ಕಿಂತಲೂ ಮಹಾರಾಣಿಯವರು ಬರೆಯಿಸಿರುವಂತೆ, ಇಲ್ಲಿಯ ರಾಜವಂಶೀಕರ ಸಹಾಯ

ಪಡೆದು ಅವನನ್ನು ಎದುರಿಸುವುದೇ ಉಚಿತವೆಂದು ಅವರಿಗೂ ತೋರಿತು. ಆ ಕೆಲಸವನ್ನು ಸಾವಕಾಶಮಾಡದೆ ನಿರ್ವಹಿಸುವುದಕ್ಕಾಗಿ ತಂಜಾವೂರಿನಲ್ಲಿ ರೆಸಿಡೆಂಟಾಗಿದ್ದ ಸಲ್ಲಿವರ್ ಎಂಬಾತನನ್ನು ನಿಯಮಿಸಿದರು.

೧೭೮೨ನೆಯ ಸಂವತ್ಸರದ ಅಕ್ಟೋಬರು ತಿಂಗಳಲ್ಲಿ ಮೈಸೂರಿನ ಪರವಾಗಿ ತಿರುಮಲರಾಯನಿಗೂ, ಇಂಗ್ಲಿಷರ ಪರವಾಗಿ ಸಲ್ಲಿವರ್ ಧೊರೆಗೂ ಸಂಧಿಯಾಯಿತು. ಆ ಸಂಧಿಯ ಷರತ್ತುಗಳನ್ನು ಮದರಾಸ್ ಗೌರ್ನರನೂ ಒಪ್ಪಿದನು. ಆ ಸಂಗತಿ ಮಹಾರಾಣಿ ಲಕ್ಷ್ಮಮ್ಮಣ್ಣಿಯವರಿಗೆ ತಿಳಿದು ಆಕೆಯೂ ಅದಕ್ಕೆ ತಮ್ಮ ಸಮ್ಮತಿಯನ್ನಿತ್ತರು. ಹೀಗೆ ಎಲ್ಲವೂ ಸಿದ್ಧವಾಯಿತು. ಇಂಗ್ಲಿಷರು ಸೈನ್ಯ ಸರಂಜಾಮುಗಳನ್ನು ಸಿದ್ಧಪಡಿಸಿಕೊಂಡು, ಮೈಸೂರನ್ನು ಬಂಧಮುಕ್ತಮಾಡಲು ದೃಢಸಂಕಲ್ಪಮಾಡಿದರು. ಆ ವೇಳೆಯಲ್ಲೇ ಅವರಿಗೆ ಇನ್ನೂ ಹೆಚ್ಚು ಉತ್ತೇಜಕವಾಗಿರುವಂತೆ, ಮಹಾರಾಣಿಯವರು ಮತ್ತೊಂದು ಪತ್ರ ಬರೆಯಿಸಿದರು. ಅದರಲ್ಲಿ, "ಶ್ರೀರಂಗಪಟ್ಟಣದಲ್ಲಿಯ ಸೈನ್ಯದಲ್ಲಿ ಅಧಿಕಾರಿಯಾಗಿರುವ ಶಾಮಯ್ಯನೂ ಇತರ ಕೆಲವು ಮಂದಿ ಅಧಿಕಾರಿಗಳೂ ನಮಗೆ ಅನುಕೂಲರಾಗಿದ್ದಾರೆ; ಆದುದರಿಂದ ಇಂಗ್ಲಿಷ್ ಸೈನ್ಯವು ಇಲ್ಲಿಗೆ ಬಂದು ಇಳಿದೊಡನೆಯೇ ನೀವು ವಿಶೇಷ ಪ್ರಯಾಸವಿಲ್ಲದೆಯೇ, ಕೋಟೆಯನ್ನೂ ಖಜಾನೆಯನ್ನೂ ವಶಪಡಿಸಿಕೊಳ್ಳಬಹುದು. ನೀವು ಗಜ್ಜಲಹಟ್ಟಿ ಕಾವೇರಿಪುರದ ಮಾರ್ಗವಾಗಿ ಇಂಗ್ಲಿಷ್ ಸೇನೆಯನ್ನು ಅತಿ ತ್ವರೆಯಾಗಿ ಕಳುಹಿಸುವುದು" ಎಂದು ಸೈನ್ಯ ಬರಬೇಕಾದ ಮಾರ್ಗವನ್ನೂ ತಿಳಿಸಿದ್ದರು.

ಹೀಗೆ ಎಲ್ಲವೂ ಒಂದು ಸುಮುಖ ಸ್ಥಿತಿಗೆ ಬಂದಿತ್ತು; ಆಗ ಒಂದು ಅಚಾತುರ್ಯ ನಡೆಯಿತು. ಅರಮನೆಯ ಸೇವಕರಲ್ಲಿ ಒಬ್ಬನು ದುರಾಸೆಗೆ ಒಳಗಾಗಿ ಆ ಸಂಗತಿಗಳನ್ನೆಲ್ಲ ಹೈದರನಿಗೆ ತಿಳಿಯಪಡಿಸಿಬಿಟ್ಟನು. ಅದನ್ನು ಕೇಳಿದ ಹೈದರನು ಮಹಾ ಕ್ರೋಧಾವೇಶ ಪರವಶನಾಗಿ ರಾಣಿಯವರ ಆಪ್ತವರ್ಗಕ್ಕೆ ಸೇರಿದವರೆಂದು ತೋರಿದ ಜನಗಳನ್ನೆಲ್ಲ ಹಿಡಿಸಿ ನಿರ್ಬಂಧದಲ್ಲಿಡಿಸಿದನು; ಕೆಲವರನ್ನು ಕೊಲ್ಲಿಸಿದನು. ಹಲವರಿಗೆ ಕಿವಿ ಮೂಗುಗಳನ್ನು ಕೊಯಿಸಿದನು. ಮಹಾರಾಣಿಯವರಿಗೆ ಆಪ್ತರೆಂದಿದ್ದ ಜನರೆಲ್ಲ ಅಲ್ಲಲ್ಲೇ

ಅಡಗಿದರು. ಹೀಗೆ ಅವರು ಯೋಚಿಸಿದ್ದ ಕಾರ್ಯಕ್ಕೆ ಪುನಃ ಒಂದು ಅಗಾಧ ಗಂಡಾಂತರವುಂಟಾಯಿತು.

ತಾವು ಬಹು ದಿನಗಳಿಂದ ಯೋಚಿಸಿ ಪ್ರಯತ್ನ ನಡೆಯಿಸಿದ ಕಾರ್ಯಕ್ಕೆ ಹೀಗೆ ಮಧ್ಯದಲ್ಲಿ ಅಗಾಧ ವಿಘ್ನವುಂಟಾಗಿ ಮಹಾರಾಣಿಯವರ ಮನಸ್ಸಿಗೆ ಆತಂಕವುಂಟಾಯಿತಾದರೂ ಆಕೆಯು ಅದಕ್ಕಾಗಿ ಹಿಂಜರಿದು ಕೂಡಲಿಲ್ಲ; ಹೇಗಾದರೂ ಮಾಡಿ ಆ ಪ್ರಬಲ ಶತ್ರುವನ್ನು ನಿರ್ಮೂಲ ಮಾಡಿದಲ್ಲದೆ ತಮಗೂ ತಮ್ಮ ರಾಜ್ಯಕ್ಕೂ ಕ್ಷೇಮವಿಲ್ಲವೆಂದುಕೊಂಡರು. ಆ ಸಂದರ್ಭ ದಲ್ಲಿ, ಏಕಾಂಗಿಯಾಗಿದ್ದ ಆ ವೃದ್ಧರಾಣಿಯವರು ಪ್ರಕಾಶಪಡಿಸಿದ ಧೈರ್ಯವು ಸಾಮಾನ್ಯವಾದುದಲ್ಲ. ಹೈದರಾಲಿಯ ಸೈನ್ಯಬಲವೂ ಟಿಪ್ಪುವಿನ ಶೌರ್ಯ ಪ್ರತಾಪಗಳೂ ಆಗ ಇಂಗ್ಲಿಷರಿಗೆ ಸಹ ಭಯಪ್ರದವಾಗಿದ್ದುವು; ಟಿಪ್ಪುವನ್ನು ಅವರು 'ಮೈಸೂರು ಹುಲಿ' ಎಂದು ಕರೆಯುತ್ತ, ಅಂತಹ ಮಹಾ ಶೂರನನ್ನು ನಾವು ಜಯಿಸಬಲ್ಲೆವೆ? ಎಂದುಕೊಂಡಿದ್ದರು. ಹೀಗೆ ರಣಧೀರರಾದ ಇಂಗ್ಲಿಷ್ ಸರದಾರರಿಗೂ ಎದೆ ನಡುಗುವಂತಹ ದುಷ್ಕರ ಸನ್ನಿವೇಶವನ್ನು ಎದುರಿಸ ಬೇಕಾಗಿದ್ದ ಸಂದರ್ಭದಲ್ಲೂ ಆ ವೃದ್ಧಮಹಾರಾಣಿಯವರು ತಮ್ಮ ಶತ್ರು ವಿನಾಶಕ ಪ್ರಯತ್ನವನ್ನು ನಿಲ್ಲಿಸದೆ, ತಮ್ಮ ಪಿತ್ರಾರ್ಜಿತವಾದ ರಾಜ್ಯವನ್ನು ಹೇಗಾದರೂ ಗಳಿಸಬೇಕೆಂದು ಮಾಡುತ್ತಿದ್ದ ಪ್ರಯತ್ನವು ಆಕೆಯ ಮನೋ ದಾರ್ಢ್ಯವನ್ನೂ ದೇಶಾಭಿಮಾನವನ್ನೂ ವ್ಯಕ್ತಗೊಳಿಸುತ್ತದೆ. ಒಂದು ಸಂದರ್ಭದಲ್ಲಿ ಆಕೆಯು ಜನರಲ್ ಮೆಡೋಸ್ ಎಂಬೊಬ್ಬ ಸರದಾರನಿಗೆ ಬರೆಯಿಸಿದ್ದ ಪತ್ರಕ್ಕೆ ಆತನಿಂದ ಬಂದ ಪ್ರತ್ಯುತ್ತರವು ಹೀಗಿದ್ದಿತಂತೆ!

"ನಿಮ್ಮ ಶತ್ರುವು ಎಂದು ನಶಿಸುವನೋ ದೇಶವು ಎಂದು ಶತ್ರುವಿನಿಂದ ಬಿಡುಗಡೆ ಹೊಂದಿ ನಿಮ್ಮ ಕೈಸೇರುವುದೋ ದೇವರಿಗೇ ಗೊತ್ತು. ವಿಜಯ ಪ್ರಾಪ್ತಿಯು ದೇವರ ಅಧೀನವಾದುದು. ನಮಗೆ ದೇವರು ಯಶಸ್ಸು ಸಾಮರ್ಥ್ಯಗಳನ್ನು ಕೊಟ್ಟರೆ ನಾವು ಅತ್ಯಾನಂದದಿಂದ ಮೈಸೂರು ರಾಜ್ಯ ವನ್ನು ನಿಮಗೆ ಒಪ್ಪಿಸುವೆವು. ರಾಜ್ಯವನ್ನು ಯಾರು ಯಾರು ಹೇಗೆ ಹೇಗೆ ವಿಭಾಗಿಸಿಕೊಳ್ಳಬೇಕೆಂಬ ಸಂಗತಿಯನ್ನು ಕುರಿತು ಈಗ ಏನೆಂದು ಹೇಳಲೂ ಸಾಧ್ಯವಿಲ್ಲ. ಮರಾಠೆಯವರೂ ನಿಜಾಮನೂ ನಮಗೆ ಮಿತ್ರರಾದುದರಿಂದ ಅವರ ಆಲೋಚನೆಯನ್ನೂ ಅನುಸರಿಸಿ ಈ ಕಾರ್ಯವನ್ನು ನಿರ್ಧರಿಸ

ಬೇಕಾಗುತ್ತದೆ. ಸಂಪೂರ್ಣ ಯುದ್ಧದ ಖರ್ಚನ್ನೂ, ಗೆದ್ದ ತರುವಾಯ ಸೈನಿಕರಿಗೆ ಬಹುಮಾನಗಳನ್ನೂ ಕೊಡಿಸುತ್ತೇವೆಂದು ನೀವು ಬರೆಯಿಸಿದ್ದೀರಿ. ಅದು ಬಹು ಯುಕ್ತವಾದ ಸಲಹೆಯೇ ಸರಿ."

ಯಾರನ್ನು ಮಹಾವೀರರೆಂದು ನಂಬಿ ಅವರ ಆಶ್ರಯ ಬೆಂಬಲಗಳಿಂದ ತಮ್ಮ ಶತ್ರುವನ್ನು ವಧಿಸಿ ಕಾರ್ಯವನ್ನು ಸಾಧಿಸಬೇಕೆಂದು ಬೆಟ್ಟದಷ್ಟು ಆಸೆಯನ್ನಿಟ್ಟುಕೊಂಡಿದ್ದರೋ ಅಂತಹ ಆಂಗ್ಲೇಯ ಸರದಾರರಿಂದಲೇ ಇಂತಹ ಪುಡಿಮಾತುಗಳ ಪ್ರತ್ಯುತ್ತರ ಬಂದರೆ ಮಹಾರಾಣಿಯವರು ಇನ್ನು ಹೇಗೆ ತಾನೇ ಧೈರ್ಯವಾಗಿರಲು ಸಾಧ್ಯವಾದೀತು? ಆದರೂ ಆ ಧೀರ ರಾಣಿಯು ಎದೆಗುಂದಲಿಲ್ಲ - ಅಧೈರ್ಯಪಡಲಿಲ್ಲ. ಅಂತಹ ನಿರುತ್ಸಾಹ ಸಂದರ್ಭದಲ್ಲೂ ಆಕೆಯು 'ಸತ್ಯಮೇವ ಜಯತೇ' ಎಂಬ ದೃಢನಂಬಿಕೆಯಿಂದ ತಮ್ಮ ಕಾರ್ಯಗಳನ್ನು ನಡೆಯಿಸುತ್ತಿದ್ದರು.

ರಾಜಕಾರ್ಯವು ಇಷ್ಟುಮಟ್ಟಿನ ಸ್ಥಿತಿಯಲ್ಲಿದ್ದಾಗಲೇ ಹೈದರನಿಗೆ ಬೆನ್ನುಫಣಿ ಎಂಬ ಮಹಾ ಅಪಾಯಕರವಾದ ವ್ರಣಜಾಡ್ಯವು ತಲೆದೋರಿತು. ತನ್ನ ದೇಹವುಳಿಯುವುದಿಲ್ಲವೆಂದು ಅವನಿಗೆ ನಿಶ್ಚಯವಾಯಿತು. ಆಗ ಆತನು ತನ್ನ ಆಪ್ತ ಅಧಿಕಾರಿಗಳಾದ ಅಬೂ ಮಹಮ್ಮದ್ ಮಿರ್ದೆ, ತೋಷೀಖಾನೆ ಕೃಷ್ಣರಾಯರು, ಪೂರ್ಣಯ್ಯನವರು, ಅಂಚೇಶಾಮಯ್ಯ ಮುಂತಾದವರನ್ನು ಬಳಿಗೆ ಕರೆದು, ಧೊರೆಗಳಿವರಾದ ಇಮ್ಮಡಿ ಕೃಷ್ಣರಾಜ ಒಡೆಯರವರು, ಸಣ್ಣ ಚಾಕರಿಯಲ್ಲಿದ್ದ ನನಗೆ ಸರ್ವಾಧಿಕಾರವನ್ನು ಕೊಟ್ಟು ಕಾಪಾಡಿದರು. ನಾನು ಉಪಕಾರಿಗಳಾದ ಅವರಿಗೆ ದ್ರೋಹಮಾಡದೆ ಇದುವರೆಗೂ ಸ್ವಾಮಿಭಕ್ತಿಯಿಂದಲೇ ನಡೆದು ಚಾಕರಿಮಾಡಿಕೊಂಡು ಇರುತ್ತಿದ್ದೇನೆ. ಮುಂದೆ ನನ್ನ ಮಗ ಟಿಪ್ಪುವೂ ಅದೇ ಮೇರೆಗೆ ನಡೆದುಕೊಂಡರೆ ಈ ಅಧಿಕಾರವು ಅವನಿಗೆ ದಕ್ಕುವುದು; ಹಾಗಲ್ಲದೆ, ದುಷ್ಟಜನಗಳ ಮಾತುಗಳಿಂದಲೂ ಕೆಟ್ಟನಡತೆಯಿಂದಲೂ ಏನಾದರೂ ಹೆಚ್ಚುಕಡಮೆಯಾಗಿ ನಡೆದರೆ ಅವನು ಕೆಟ್ಟುಹೋಗುವನು. ಈ ಸಂಗತಿಯನ್ನು ಅವನಿಗೆ ರಹಸ್ಯವಾಗಿ ತಿಳಿಸಿರಿ" ಎಂದು ಹೇಳಿ ನವಾಬ್ ಹೈದರಲ್ಲೀ ಖಾನನು ೧೭೮೨ನೆಯ ಇಸವಿಯಲ್ಲಿ ತೀರಿಹೋದನು.

ತಂದೆಯು ತೀರಿಹೋದ ತರುವಾಯ ಟಿಪ್ಪೂಸುಲ್ತಾನನು ರಾಜ್ಯಕ್ಕೆ ಬಂದು ಅಧಿಕಾರವನ್ನು ಸ್ವಾಧೀನಕ್ಕೆ ತೆಗೆದುಕೊಂಡು ರಾಜಕಾರ್ಯಗಳನ್ನು ಗಮನಿಸತೊಡಗಿದನು. ಪ್ರಾರಂಭದ ಕೆಲವು ದಿನಗಳು ಆತನು ವಿಹಿತವಾಗಿಯೇ ಇದ್ದನು. ತರುವಾಯ ಅವನ ಮಾರ್ಗವೇ ಬದಲಾಯಿಸಿತು. ತನ್ನ ತಂದೆಯು ಹೇಳಿದ್ದ ಬುದ್ಧಿವಾದಗಳು ಆತನಿಗೆ ಮರೆತುಹೋದುವು. ದಿನ ದಿನಕ್ಕೆ ಸೈನ್ಯಬಲ ಧನಬಲಗಳು ಹೆಚ್ಚಿದುವು. ಮಹಾಶೂರನಾದ ಆತನು ಯಾರ ಲಕ್ಷ್ಯವೂ ಇಲ್ಲದೆ, ಸುತ್ತಮುತ್ತಲಿನ ರಾಜ್ಯಗಳನ್ನೆಲ್ಲ ತನ್ನ ಆಡಳಿತಕ್ಕೇ ಒಳಪಡಿಸಿಕೊಂಡು, ನವರತ್ನಗಳಿಂದ ಒಂದು ವ್ಯಾಘ್ರಪೀಠವನ್ನು ಮಾಡಿಸಿ, ತಾನು ಅದರ ಮೇಲೆ ಕುಳಿತು ಬಾದಷಹನೆಂದು ಹೊಗಳಿಸಿಕೊಳ್ಳಬೇಕೆಂಬ ಕುತೂಹಲದಿಂದ ಇದ್ದನು.

ಹೀಗೆ ಹೈದರಾಲಿಯ ಸರ್ವಾಧಿಕಾರ ಮುಗಿದು, ಸುಲ್ತಾನನ ದೌಲತ್ತು ನಡೆಯುತ್ತಿರುವಾಗ ಮಹಾರಾಣಿಯವರಿಗೆ ಇನ್ನೂ ಹೆಚ್ಚಿನ ಆತಂಕ ವುಂಟಾಯಿತಾದರೂ, ಆಕೆಯು ತಮ್ಮ ಪ್ರಯತ್ನವನ್ನು ನಿಲ್ಲಿಸದೆ ಸಾಧ್ಯವಾದ ಮಾರ್ಗಗಳಿಂದಲೆಲ್ಲ ನಡೆಯಿಸುತ್ತಲೇ ಇದ್ದರು.

---

## ೧೧ ಮೈಸೂರಿನ ಭಾಗ್ಯದೇವತೆ

ಮೈಸೂರು ಸಿಂಹಾಸನದ ಮೇಲೆ ಅಧಿಪತಿಗಳಾಗಿ ಕುಳಿತಿದ್ದ ಖಾಸಾ ಚಾಮರಾಜರು ಸರ್ವಾಧಿಕಾರಿಯ ಆಡಳಿತದಿಂದುಂಟಾದ ಪ್ರಜಾಕ್ಷೋಭೆ ಯನ್ನು ಕೇಳಿ ಮಹಾ ವ್ಯಸನಾಕ್ರಾಂತರಾದರು. ತಾವು ರಾಜ್ಯದ ಆಡಳಿತದಲ್ಲಿ ಪ್ರವೇಶಿಸಲು ಅವಕಾಶವೇ ಇರಲಿಲ್ಲ. ದಿನಗಳು ಕಳೆದಂತೆಲ್ಲ ರಾಜ್ಯಾಧಿಕಾರಿ ಗಳು ಮಹಾರಾಜರಾದ ತಮ್ಮನ್ನು ಯಾವ ಆಡಳಿತ ವಿಚಾರವನ್ನೂ ಕೇಳಿ ಕೆಲಸಮಾಡುವುದು ನಿಂತುಹೋಯಿತು. ಈ ಸ್ಥಿತಿಯುಂಟಾದುದು ಅವರಿಗೆ ಬಹು ಬೇಸರವನ್ನುಂಟುಮಾಡಿತು. ಆಗ ಅವರು ಬೇರೆ ಮಾರ್ಗಕಾಣದೆ, ತಮ್ಮ ರಾಜ್ಯವನ್ನು ಪುನಃ ಗಳಿಸಿ ಪಾಲಿಸುವಂತಹ ಪೂರ್ಣಾಯುರ್ಯೋಗ ವುಳ್ಳ ಒಂದು ಪುತ್ರರತ್ನವನ್ನು ಕರುಣಿಸಬೇಕೆಂದು ನಂಜನಗೂಡಿನ

ಶ್ರೀಕಂಠೇಶ್ವರ ಸ್ವಾಮಿಯನ್ನು ಆರಾಧಿಸಿ ಕೋಟಿ ಪಂಚಾಕ್ಷರೀ ಜಪ ಹೋಮಾದಿಗಳನ್ನು ಆಚರಿಸಿದರು. ಮಹಾ ಲಕ್ಷ್ಮಮ್ಮಣ್ಣಿಯವರು ಸೂತ್ರ ಧಾರಿಯಂತಿದ್ದು, ಮಹಾರಾಜರಿಂದ ಈ ಎಲ್ಲಾ ಧಾರ್ಮಿಕ ಕಾರ್ಯಗಳನ್ನೂ ನಡೆಯಿಸಿದರು. ಶ್ರೀಸ್ವಾಮಿಯ ಅನುಗ್ರಹವಾಯಿತೋ ಎಂಬಂತೆ ಮುಂದೆ ಯುಕ್ತಕಾಲದಲ್ಲಿ ರಾಜಪತ್ನಿ ಕೆಂಪನಂಜಮ್ಮಣ್ಣಿಯವರು ಗರ್ಭಧಾರಣೆಮಾಡಿ ನವಮಾಸ ಕಳೆಯಲು ಒಂದು ಪುರುಷ ಶಿಶುವನ್ನು ಪ್ರಸವಿಸಿದರು. ಈ ಶಿಶು ವಿಗೆ ನಂಜರಾಜ ಒಡೆಯರೆಂದು ನಾಮಕರಣಮಾಡಿದರು. ಇವರೇ ಮುಂದೆ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರೆಂದು ಪ್ರಸಿದ್ಧರಾದವರು.

ಸರ್ವಾಧಿಕಾರಿಯ ಪ್ರಾಬಲ್ಯವಾದರೋ ದಿನ ದಿನಕ್ಕೆ ಹೆಚ್ಚತೊಡಗಿತು ಮೇಲೆ ಹೇಳಿದಂತೆ ಆತನು ವ್ಯಾಘ್ರಾಸನವನ್ನು ಮಾಡಿಸಿಕೊಂಡು ತಾನೇ ಮೈಸೂರಿನ ನವಾಬನೆಂದು ಹೊಗಳಿಸಿಕೊಳ್ಳುವ ಹವಣಿಕೆಯಲ್ಲಿ ಇದ್ದನು ಆತನ ಈ ಅಪೇಕ್ಷೆಯು ನೆರವೇರಲು ರಾಜವಂಶದ ಬೆಳೆವಣಿಗೆಯು ವಿಘ್ನಕಾರಿ ಯಾಗಿತ್ತೆಂದು ಹೇಳಬೇಕಾದುದಿಲ್ಲವಷ್ಟೆ! ಆದುದರಿಂದ ಈ ಮಧ್ಯೆ ಮಹಾ ರಾಜರಿಗೆ ಪುತ್ರಸಂತಾನವಾದುದು ಸುಲ್ತಾನನಿಗೆ ಸಂತೋಷವನ್ನುಂಟು ಮಾಡಿತೆಂದು ಹೇಳಲಾದೀತೆ?

ಇಂತಹ ಬಿಕ್ಕಟ್ಟಿನ ಸಂದರ್ಭದಲ್ಲೇ ರಾಜವಂಶಕ್ಕೆ ಮತ್ತೊಂದು ಅಗಾಧ ದುರ್ವಿಧಿಯೊದಗಿತು. ಖಾಸಾ ಚಾಮರಾಜ ಒಡೆಯರು ಅಕಸ್ಮಾತ್ ಖಾಯಿಲೆಯಿಂದ ಸ್ವರ್ಗಸ್ಥರಾದರು. ರಾಜವಂಶದಲ್ಲಿ ಅನಾಥರಾದ ಮೂರು ನಾಲ್ಕು ಮಂದಿ ಸ್ತ್ರೀಯರು, ಎರಡು ವರ್ಷದ ಒಂದು ಗಂಡು ಮಗು, ಇಷ್ಟು ಮಂದಿ ಮಾತ್ರ ಉಳಿದರು. ದಕ್ಷರಾದ ಪುರುಷರು ಬದುಕಿದ್ದು ರಾಜಸಿಂಹಾ ಸನದ ಮೇಲೆ ಕುಳಿತಿದ್ದಾಗಲೇ, ತುಟಿ ಮೀರಿದ ಹಲ್ಲಿನಂತೆ ಪ್ರಬಲಿಸಿ, ಸರ್ವಾಧಿಕಾರ ನಡೆಯಿಸುತ್ತ, ಅವರನ್ನು ನಾಮಮಾತ್ರ ರಾಜರೆನ್ನಿಸಿದ್ದ ಸುಲ್ತಾನನು ಈಗ ಮಹಾರಾಜರ ಮರಣದಿಂದ ಕೇವಲ ಅನಾಥರಾಗಿ ಉಳಿದ ಆ ಸ್ತ್ರೀ ಜನರನ್ನು ಹೇಗೆ ನಡೆಯಿಸಿಕೊಳ್ಳತೊಡಗಿದನೆಂದು ಹೇಳಬೇಕಾ ದುದೇನು?

ಆ ಸಂದರ್ಭದಲ್ಲಿ ಮಹಾರಾಣಿಯವರು ಬರೆದು ತಮ್ಮ ವಕೀಲರಿಗೆ ಕಳುಹಿಸುತ್ತಿದ್ದವುಗಳೆಂದು ಪ್ರಕಟವಾಗಿರುವ ಪತ್ರಗಳಿಂದ ಆಗ ರಾಜವಂಶದ

ಆ ಸ್ತ್ರೀಯರು ಎಷ್ಟು ಕಷ್ಟಕ್ಕೆ ಒಳಗಾಗಿದ್ದರೆಂಬುದು ತಿಳಿಯಬರುತ್ತದೆ. ಅವರು ಅರಮನೆಯಲ್ಲಿ ವಾಸಮಾಡುವಂತಿರಲಿಲ್ಲವಂತೆ; ಹಿತ್ತಾಳೆ ತಾಮ್ರದ ಪಾತ್ರೆಗಳಲ್ಲಿ ಅಡಿಗೆ ಮಾಡಿಕೊಳ್ಳಲೂ ಅವರಿಗೆ ಎಡೆಯಿಲ್ಲದೆ ಮಣ್ಣಿನ ಮಡಕೆಗಳಲ್ಲಿ ಬೇಯಿಸಿಕೊಂಡು, ಬೆಳ್ಳಿ ಬಂಗಾರದ ತಟ್ಟೆಗಳಿಗೆ ಬದಲಾಗಿ ಎಲೆಗಳಲ್ಲಿ ಬಡಿಸಿಕೊಂಡು ಊಟಮಾಡಬೇಕಾಗಿದ್ದಿತಂತೆ ಅವರ ವಾಸ ಸ್ಥಳವನ್ನು ಆಗಾಗ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬದಲಾಯಿಸು ವಾಗ, ಅವರು ಸಿಪಾಯಿಗಳ ಶೋಧನೆಗೂ ಒಳಪಡಬೇಕಾಗಿದ್ದಿತಂತೆ! ಅವರಿಗೆ ನಿತ್ಯದ ಊಟಕ್ಕೆ ಬೇಕಾದ ಪದಾರ್ಥಗಳೂ ದಿನಪಡಿಯಂತೆ ಕಳುಹಿಸ ಲ್ಪಡುತ್ತಿದ್ದುವಂತೆ; ಸಾಲದುದಕ್ಕೆ ಸದಾ ಪ್ರಾಣಭಯವು ತಪ್ಪಿದ್ದುದೇ ಇಲ್ಲ ವಂತೆ! ತಮಗೆ ಯಾವ ಹೊತ್ತಿಗೆ ಯಾವ ರೂಪದಲ್ಲಿ ಮೃತ್ಯುವೊದಗುವು ದೆಂದು ತಿಳಿಯದೆ ಅವರು ಸದಾ ಮರಣವನ್ನು ಎದುರು ನೋಡಿಕೊಂಡೇ ಜೀವಿಸಿದ್ದರಂತೆ!

ಇಂತಹ ವಿಚಾರಗಳನ್ನೊಳಕೊಂಡ ಪತ್ರಗಳನ್ನು ತಮಗಿದ್ದ ಅಷ್ಟು ಮಟ್ಟಿನ ನಿರ್ಬಂಧ ಆತಂಕ ಅಡಚಣೆಗಳ ಮಧ್ಯೆ ಬರೆಯಿಸಿ, ಮಹಾರಾಣಿ ಲಕ್ಷ್ಮಮ್ಮಣ್ಣಿಯವರು, ತಮ್ಮ ವಾಸಸ್ಥಳದ ಸುತ್ತಲೂ ಕಾವಲಿದ್ದ ಸೇವಕರ ದೃಷ್ಟಿಗೆ ಬೀಳದಂತೆ ಹೊರಕ್ಕೆ ಕಳುಹಿಸಬೇಕು; ಈ ಸನ್ನಿವೇಶವನ್ನು ಕುರಿತು ಯೋಚಿಸುವುದೇ ಎಷ್ಟೋ ಭಯಂಕರವಾಗಿದೆಯಲ್ಲವೆ? ಅಂತಹ ಅಪಾಯಕರ ಸಂದರ್ಭದಲ್ಲಿ ಪುಟ್ಟಮಾದಯ್ಯನೆಂಬ ಆಳೊಬ್ಬನು ತನ್ನ ಜೀವದ ಮೇಲಿನ ಆಸೆಯನ್ನು ಬಿಟ್ಟು ಅಂತಹ ಪತ್ರಗಳನ್ನು ಕೌಪೀನದಲ್ಲಿಟ್ಟುಕೊಂಡೋ ಮೇಣ ದಲ್ಲಿ ಹುದುಗಿಸಿ ಬಾಯಲ್ಲಿಟ್ಟುಕೊಂಡೋ ಸಿಪಾಯಿಗಳ ಪರೀಕ್ಷೆಯಿಂದ ಪಾರಾಗಿ ಹೊರಕ್ಕೆ ಕೊಂಡೊಯ್ದು ಕಾಲುನಡಿಗೆಯಿಂದ ಮದರಾಸಿಗೋ ತಂಜಾವೂರಿಗೋ ಹೋಗಿ ಶ್ರೀ ತಿರುಮಲರಾಯ ಸೋದರರಲ್ಲಿಗೆ ತಲ್ಪಿಸ ಬೇಕು; ಅವರು ಅದನ್ನು ಇಂಗ್ಲಿಷ್ ಗೌರ್ನರಸಿಗೋ ಇತರ ಸರದಾರರಿಗೋ ತಲ್ಪಿಸಿ ಮುಂದಿನ ಕಾರ್ಯಭಾಗ ನಡೆಸಬೇಕು. ಹೀಗಿದ್ದಿತಂತೆ ಅಂದಿನ ಪರಿಸ್ಥಿತಿ!

ಗಂಡು ದಿಕ್ಕಿಲ್ಲದೆ ಏಕಾಂಗಿಯಾಗಿದ್ದಾಗ ಪ್ರಾಪ್ತವಾಗಿದ್ದ ಆ ಕಷ್ಟ ಕಾಲದಲ್ಲಿ ಮಹಾರಾಣಿಯವರು ಪ್ರಕಟಿಸಿದ ಧೈರ್ಯ ಸಾಹಸ ತ್ಯಾಗಗಳು

ಪರಮಾವಧಿಗೆ ಮುಟ್ಟುತ್ತವೆ. ಆಗರ್ಭ ಶ್ರೀಮಂತಳಾದ ಆಕೆಯ ಸರ್ವ ಸಂಪತ್ತನ್ನೂ ಸುಲಿದರು; ರಾಜಸ್ತ್ರೀಯರು ಊಟಮಾಡುತ್ತಿದ್ದ ಬಂಗಾರದ ತಟ್ಟೆಗಳನ್ನು ಕಿತ್ತು ಒಯಿದರು. ಆದರೂ ಆಕೆಯ ಧೈರ್ಯವೂ ನಿಶ್ಚಲ ಮನೋಭಾವವೂ ಚಲಿಸಲಿಲ್ಲ. ಮೂರು ವರ್ಷದ ಹಸುಳೆಯ ಕೈಬಳೆಗಳನ್ನು ಕಿತ್ತಾಗ ಮಗುವು ಚೀರಿಟ್ಟಿತಂತೆ! ಆ ಸಂದರ್ಭದಲ್ಲೂ ಆ ಧೀರ ರಮಣಿಯ ಚಿತ್ತವೃತ್ತಿಯು ಕದಲಲಿಲ್ಲ. ಆದರೆ ಮುಂದೊಮ್ಮೆ ಅಧಮನೊಬ್ಬನು ಒಬ್ಬ ನಾರೀಮಣಿಯ ಮಾನಾಪಹಾರ ಮಾಡಿದನೆಂಬ ವಾರ್ತೆಯು ಆಕೆಯ ಕಿವಿಗೆ ಬಿದ್ದಿತಂತೆ! ಆಗ ಮಾತ್ರ ಆ ಮಹಾರಾಣಿಯ ಹೃದಯವು ಚಲಿಸಿ, ಕಣ್ಣೀರ ಒರತೆಯು ಹರಿಯಿತಂತೆ! “ಮಹಿಷಾಸುರ ಮರ್ದಿನೀ! ಚಾಮುಂಡಾಂಬಿಕೇ! ಇದೂ ನಿನಗೆ ಸಮ್ಮತವೇ? ಶ್ರೀಕಂಠೇಶ್ವರಾ! ನೀನೂ ಈ ಅನ್ಯಾಯಗಳನ್ನು ನೋಡಿಕೊಂಡು ಕುಳಿತಿರುವೆಯಾ? ನಮ್ಮ ದುಸ್ಥಿತಿಯು ಇನ್ನೂ ಎಷ್ಟು ಮಟ್ಟಿನ ಪರಮಾವಧಿ ಆಳಕ್ಕೆ ಇಳಿಯಬೇಕೆಂದು ಇಚ್ಛಿಸಿರುವೆ?” ಎಂದು ಕಣ್ಣೀರು ಸುರಿಸಿ ಗೋಳಿಟ್ಟರಂತೆ.

ಕೇವಲ ತಾರುಣ್ಯದಲ್ಲಿ ದುರ್ದೈವದಿಂದ ಬಂದೊದಗಿದ ವೈಧವ್ಯ, ಸೆರೆಮನೆಯ ವಾಸ, ಮೇಲೆ ಮೇಲೆ ಆಗುತ್ತಿದ್ದ ಅಪಮಾನಗಳು, ಹಿಂಸೆ, ಇವುಗಳೆಲ್ಲವೂ ಆ ಧೀರ ರಮಣಿಯ ಧೈರ್ಯವನ್ನೂ ಮನೋದಾರ್ಢ್ಯವನ್ನೂ ಮೇಲೆ ಮೇಲೆ ಹೆಚ್ಚಿಸಲು ಸಹಾಯಕವಾದುವಲ್ಲದೆ ಕುಂದಿಸಲಿಲ್ಲ!

ಮಹಾರಾಣಿಯವರು ಬರೆಯಿಸಿ ಕಳುಹಿಸುತ್ತಿದ್ದ ಈ ಪತ್ರಗಳ ವಿಚಾರ ವೆಲ್ಲ ಆಕೆಯ ವಕೀಲರ ಮೂಲಕ ಇಂಗ್ಲಿಷ್ ಗೌರ್ನರನಿಗೆ ತಿಳಿಯಿತು; ದಿನ ದಿನಕ್ಕೆ ಹೆಚ್ಚಿಹೋಗುತ್ತಿದ್ದ ಟಿಪ್ಪುವನ್ನು ಇನ್ನೂ ಉದಾಸೀನಭಾವ ದಿಂದ ಬಿಟ್ಟಿರುವುದು ಅಪಾಯಕರವೆಂದು ಆತನಿಗೂ ಗೋಚರವಾಯಿತು. ಆದುದರಿಂದ ಸುಲ್ತಾನನೊಂದಿಗೆ ಯುದ್ಧಮಾಡಬೇಕಾದುದೇ ಸರಿಯೆಂದು ಕಲ್ಕತ್ತೆಯಲ್ಲಿದ್ದ ಗೌರ್ನರ್ ಜನರಲ್ ಸಾಹೇಬನೊಂದಿಗೆ ಯೋಚಿಸಿ ನಿರ್ಧರ ಮಾಡಿದನು. ಒಡನೆಯೇ ಯುದ್ಧ ವಿದ್ಯಾವಿಶಾರದರಾದ ಜನರಲ್ ಹ್ಯಾರಿಸ್, ಕರ್ನಲ್ ವೆಲ್ಲೆಸ್ಲಿ ಮುಂತಾದ ಸರದಾರರುಗಳು ಸೈನ್ಯದೊಂದಿಗೆ ಹೊರಟರು. ಅವರು ಪೂನೆಯ ಪೇಷ್ವೆಯೊಂದಿಗೂ ಹೈದರಾಬಾದಿನ ನಿಜಾಮನೊಂದಿಗೂ ಯೋಗ್ಯ ಕರಾರುಗಳನ್ನು ಮಾಡಿಕೊಂಡರು. ೧೭೯೯ನೆಯ ಇಸವಿಯ

ಮೇ ತಿಂಗಳ ವೇಳೆಗೆ ಇಂಗ್ಲಿಷ್ ಸೈನ್ಯವು ಬಂದು ಶ್ರೀರಂಗಪಟ್ಟಣದ ಬಳಿ ಇಳಿಯಿತು. ಶ್ರೀರಂಗಪಟ್ಟಣದ ರಣಾಂಗಣದಲ್ಲಿ ಸುಲ್ತಾನನ ಮೈಸೂರು ಸೈನ್ಯಕ್ಕೂ ಇಂಗ್ಲಿಷರ ಸೈನ್ಯಕ್ಕೂ ಘೋರ ಸಂಗ್ರಾಮ ನಡೆಯಿತು. ಇದು ಸುಪ್ರಸಿದ್ಧ ಐತಿಹಾಸಿಕ ವಿಷಯ. ಈ ಯುದ್ಧದ ಪರಿಣಾಮವಾಗಿ ೧೭೯೯ ನೆಯ ಮೇ ೫ನೆಯ ದಿನ ಟಿಪ್ಪೂಸುಲ್ತಾನನು ಹತನಾದನು. ಆತನ ಮರಣ ದಿಂದ ಮೈಸೂರು ರಾಜಸಿಂಹಾಸನವು ಬಂಧಮುಕ್ತವಾಯಿತು; ರಾಜವಂಶೀ ಯರೂ ಶತ್ರುಬಾಧೆಯಿಂದ ನಿವೃತ್ತರಾಗಿ ಸಂತೋಷಗೊಂಡರು.

ಮಹಾರಾಣಿಯವರು ತರುವಾಯ ವೃದ್ಧಮಂತ್ರಿ ಪೂರ್ಣಯ್ಯನವರ ಸಲಹೆಯಂತೆ ಕಂಪೆನಿ ಸರ್ಕಾರದವರೊಂದಿಗೆ ಕೌಲು ಕರಾರುಗಳನ್ನೆಲ್ಲ ಕ್ರಮ ವಾಗಿ ಮಾಡಿಸಿದರು. ಐದು ವಯಸ್ಸಿನ ನಂಜರಾಜರವರನ್ನು ಮುಮ್ಮಡಿ ಕೃಷ್ಣರಾಜ ಒಡೆಯರೆಂಬ ನಾಮಧೇಯದಿಂದ ಮೈಸೂರು ರತ್ನಸಿಂಹಾಸನದ ಮೇಲೆ ಕೂರಿಸಿ ಶಾಸ್ತ್ರೋಕ್ತವಾಗಿ ಪಟ್ಟಾಭಿಷೇಕ ಮಾಡಿಸಿದರು. ದಿವ್ಯ ಸುಮುಹೂರ್ತದಲ್ಲಿ, ಹೈದರಾಬಾದಿನ ನಿಜಾಮರ ಪ್ರತಿನಿಧಿಯಾಗಿ ಬಂದಿದ್ದ ಮೀರ್ ಆಲಿಮನೂ, ಬ್ರಿಟಿಷ್ ಕಂಪೆನಿ ಸರ್ಕಾರದ ಪರವಾಗಿ ಬಂದಿದ್ದ ಜನರಲ್ ಹ್ಯಾರಿಸ್ ಸಾಹೇಬನೂ ನಿಂತು ಬಾಲ ಮಹಾರಾಜರಿಗೆ ಹಸ್ತ ಲಾಘವ ಕೊಟ್ಟು ಅವರನ್ನು ದಿವ್ಯ ರತ್ನಸಿಂಹಾಸನದ ಮೇಲೆ ಕುಳ್ಳಿರಿಸಿದರು. ಆ ಸಂತೋಷ ಸಮಯದಲ್ಲಿ ಪ್ರಜೆಗಳೆಲ್ಲರೂ ಜಯ ಜಯ ಧ್ವನಿಮಾಡಿ ತಮ್ಮ ಆನಂದವನ್ನು ವ್ಯಕ್ತಪಡಿಸಿದರು; ಅಷ್ಟು ಮಟ್ಟಿಗೆ ಮೈಸೂರು ರಾಜ ಸಿಂಹಾಸನವನ್ನು ಪುನಃ ಸಾಧಿಸಿದ ಮಹಾರಾಣಿಯವರ ಕೀರ್ತಿಯನ್ನು ಸಹಸ್ರಮುಖಗಳಿಂದ ಹೊಗಳಿದರು.

ರಾಜವಂಶವು ಅಗಾಧ ಸಂಕಟಕ್ಕೆ ಸಿಲುಕಿ ಅಳಿಯಲು ಸಿದ್ಧವಾಗಿದ್ದಾಗ ಅದನ್ನು ತಮ್ಮ ಧೈರ್ಯ ಸಾಹಸ ತಾಳ್ಮೆ ದೂರಾಲೋಚನೆ ರಾಜನೀತಿ ಕೌಶಲ ಮುಂತಾದುವುಗಳಿಂದ ಕಾಪಾಡಿದ ಮಹಾರಾಣಿ ಲಕ್ಷ್ಮಮ್ಮಣ್ಣಿ ಯವರನ್ನು ಮೈಸೂರಿನ ರಾಜ್ಯಲಕ್ಷ್ಮಿ ಎನ್ನಲು ಏನಾದರೂ ಸಂದೇಹವುಂಟೆ? ಈ ಸಂಧಿ ಕಾಲದಲ್ಲಿ ನಮ್ಮ ದೇಶಕ್ಕೆ ಈ ದ್ವಿತೀಯ ರಾಜ್ಯಲಕ್ಷ್ಮಿಯ ಅನು ಗ್ರಹವಾಗದೆ ಇದ್ದಲ್ಲಿ, ಈ ಮಹಾಕಾರ್ಯವು ಸಾಧ್ಯವಾಗಿ ರಾಜಸಿಂಹಾಸನವು ಪೂರ್ವದ ರಾಜವಂಶಕ್ಕೆ ದೊರೆಯುವ ಸಂಭವವಿದ್ದಿತೇ? ಈ ಸಂದರ್ಭವನ್ನು

ಯೋಚಿಸಿದರೆ ಮಹಾರಾಣೀ ಲಕ್ಷ್ಮಮ್ಮಣ್ಣಿಯವರು, ಆ ಕಾಲದಲ್ಲಿ ನೆರವೇರಿಸಿದ ಅಗಾಧ ಕಾರ್ಯಕ್ಕಾಗಿ, ಆಕೆಯನ್ನು ಮೈಸೂರಿನ ಭಾಗದೇವತೆಯೆಂದು ಭಾವಿಸಿ ಆಕೆಯ ಚರಿತ್ರೆಯನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡುವುದು ಯುಕ್ತವೂ ಆವಶ್ಯಕವೂ ಆಗಿದೆಯಲ್ಲವೆ?

---

## ೧೨ ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರು

ಮೈಸೂರಿನ ರಾಜಸಿಂಹಾಸನಕ್ಕೆ ಮಹತ್ತಾದ ಅಪಾಯ ಬಂದೊದಗಿದ್ದ ಎರಡು ಸಂದರ್ಭಗಳಲ್ಲಿ ಅದನ್ನು ಕಾಪಾಡಲು ಅಗಾಧ ಕಷ್ಟಸಂಕಟ ಪ್ರಾಣಾಪಾಯಗಳನ್ನು ಅನುಭವಿಸಿದ ಇಬ್ಬರು ರಾಜ್ಯಲಕ್ಷ್ಮಿಯರ ಚರಿತ್ರೆಯನ್ನು ಈವರೆಗೆ ಓದಿದೆವಲ್ಲವೆ? ತೃತೀಯ ರಾಜ್ಯಲಕ್ಷ್ಮಿಯ ಚರಿತ್ರೆಯನ್ನು ಈಗ ಗಮನಿಸೋಣ. ಇವರು ಶ್ರೀವಾಣೀವಿಲಾಸ ಸನ್ನಿಧಾನದವರೆಂದು ಸುಪ್ರಸಿದ್ಧರಾಗಿದ್ದ ಮಹಾರಾಣೀ ಕೆಂಪನಂಜಮ್ಮಣ್ಣಿಯವರು; ಆಳಿದ ಮಹಾಪ್ರಭು ಶ್ರೀಚಾಮರಾಜೇಂದ್ರ ಒಡೆಯರವರ ಧರ್ಮಪತ್ನಿಯವರು. ಇವರ ಕಾಲದಲ್ಲಿ ರಾಜ್ಯಕ್ಕೆ ಹಿಂದಿನ ಎರಡು ಸನ್ನಿವೇಶಗಳಲ್ಲಿ ಬಂದಿದ್ದಂತಹ ಮಹದಾಪತ್ತೇನೂ ಬಂದೊದಗಲಿಲ್ಲ. ಆದರೂ ಸಮಯ ಸಂದರ್ಭ ಸ್ಥಿತಿ ಗತಿಗಳನ್ನು ಕುರಿತು ಯೋಚಿಸಿದರೆ ಅದೂ ತಕ್ಕಷ್ಟು ಚಿಂತಾಜನಕವಾದ ಆಪತ್ತೇ ಎಂದು ಹೇಳಬಹುದು. ಆ ಕಾಲದಲ್ಲಿ ಮಹಾರಾಣಿಯವರು ತಮ್ಮ ಧೈರ್ಯ, ಮನೋದಾರ್ಢ್ಯ, ಬುದ್ಧಿಬಲ, ತ್ಯಾಗ ಇವುಗಳಿಂದ ಎಷ್ಟುಮಟ್ಟಿನ ಕಾರ್ಯಸಾಧನೆ ಮಾಡಿದರೆಂಬುದನ್ನೂ, ಮೈಸೂರನ್ನು ಭಾರತದೇಶದಲ್ಲೇ **ಮಾದರಿ ರಾಜ್ಯ** ಎಂಬ ಪ್ರಖ್ಯಾತಿಗೆ ಪಾತ್ರವನ್ನಾಗಿ ಮಾಡಿದ ಎಂತಹ 'ಒಂದು ದಿವ್ಯ ರಾಜಚೂಡಾಮಣಿಯನ್ನು ನಮ್ಮ ದೇಶಕ್ಕೆ ಕರುಣಿಸಿದರು ಎಂಬುದನ್ನೂ ಯೋಚಿಸಿದಲ್ಲಿ, ಶ್ರೀವಾಣೀವಿಲಾಸ ಸನ್ನಿಧಾನಂಗಳವರನ್ನು **ಮೈಸೂರಿನ ತೃತೀಯ ರಾಜ್ಯಲಕ್ಷ್ಮಿ** ಎಂದು ಸಂಬೋಧಿಸಿ ಗೌರವಿಸುವುದೂ ನಮ್ಮ ಕರ್ತವ್ಯವೆಂಬುದನ್ನು ತಿಳಿಯಬಹುದು.

ಪೂಜ್ಯ ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಧೈರ್ಯ ಸಾಹಸ ಸ್ವಾರ್ಥ ತ್ಯಾಗಗಳ ಫಲವಾಗಿ ಮೈಸೂರು ಪೂರ್ವದ ರಾಜವಂಶಕ್ಕೆ ದಕ್ಕಿತಲ್ಲವೆ! ಹಾಗೆ ದೊರೆತ ರಾಜ್ಯವನ್ನು ಕಂಪೆನಿ ಸರ್ಕಾರದವರು, ಮುಮ್ಮಡಿ ಕೃಷ್ಣರಾಜ ಒಡೆಯರು ವಿದ್ಯಾಬುದ್ಧಿಗಳನ್ನು ಕಲಿತು ಪ್ರಾಪ್ತವಯಸ್ಸಿಗೆ ಬರುವವರೆಗೂ ಮಹಾ ಅನುಭವಿಗಳೂ ರಾಜನೀತಿ ವಿಚಕ್ಷಣರೂ ಆಗಿದ್ದ ದಿವಾನ್ ಪೂರ್ಣಯ್ಯ ನವರ ಆಡಳಿತದಲ್ಲಿಟ್ಟು ಪಾಲಿಸಿದರು. ಆ ಮಂತ್ರಿಶ್ರೇಷ್ಠರು ರಾಜ್ಯದ ಆಡಳಿತವನ್ನು ತಹಬಂದಿಗೆ ತಂದು ಬೇರೆ ಬೇರೆ ಇಲಾಖೆಗಳನ್ನು ಏರ್ಪಡಿಸಿ, ರಾಜ್ಯದ ಆದಾಯ ವೆಚ್ಚಗಳನ್ನು ಹಿಡಿತಕ್ಕೆ ತಂದುಕೊಂಡು ಭಂಡಾರವನ್ನು ಚೆನ್ನಾಗಿ ಅಭಿವೃದ್ಧಿಗೊಳಿಸಿದರು. ದೇಶದಲ್ಲಿ ದಿನದಿನಕ್ಕೆ ವ್ಯವಸಾಯ ವ್ಯಾಪಾರ ಮುಂತಾದುವು ಹೆಚ್ಚಿ ದುಷ್ಟರ ಹಾವಳಿ ಅಡಗಿ ಪ್ರಜೆಗಳು ಸುಖ ಶಾಂತಿ ಸಮಾಧಾನಗಳಿಂದ ಜೀವಿಸುವಂತಹ ಸ್ಥಿತಿಯು ಸ್ಥಾಪನೆಯಾಯಿತು.

ಶ್ರೀಮುಮ್ಮಡಿಯ ಪ್ರಭುಗಳು ಸಕಲ ವಿದ್ಯಾಪಾರಂಗತರಾಗಿ ರಾಜ್ಯದ ಅಧಿಕಾರವನ್ನು ತಾವೇ ನೋಡಿಕೊಳ್ಳಲು ದಕ್ಷರಾದರು. ಒಡನೆಯೇ ಪೂರ್ಣಯ್ಯನವರು ಕಂಪೆನಿ ಸರ್ಕಾರದವರ ಅನುಮತಿಯನ್ನು ಪಡೆದು ಅವರಿಗೆ ಕ್ರಿ. ಶ. ೧೮೧೦ನೆಯ ಇಸವಿಯಲ್ಲಿ ರಾಜ್ಯಾಡಳಿತವನ್ನು ಒಪ್ಪಿಸಿದರು. ಮುಂದೆ ಮಹಾರಾಜರು ಇಪ್ಪತ್ತು ವರ್ಷಕಾಲ ರಾಜ್ಯಭಾರ ಮಾಡಿದರು. ಈ ಮಹಾ ರಾಜರ ಕಾಲದಲ್ಲಿ ದೇಶದಲ್ಲಿ ಎಲ್ಲೆಲ್ಲೂ ದೇವಸ್ಥಾನಗಳೂ ಧರ್ಮಸ್ಥಳಗಳೂ ಜೀರ್ಣೋದ್ಧಾರವಾದುವು; ಛತ್ರ ಮಠಾದಿಗಳು ವಿಶೇಷ ಪ್ರೋತ್ಸಾಹ ಹೊಂದಿದುವು; ಕರ್ಣಾಟಕ ಭಾಷಾ ಸಾಹಿತ್ಯವು ವಿಶೇಷವಾಗಿ ಬೆಳೆಯಿತು. ಸನಾತನ ಧರ್ಮೋಜ್ಜೀವನಕ್ಕೆ ಅಗಾಧ ಬೆಂಬಲವಿತ್ತು ಮಹಾರಾಜರು ಅದು ಮೈಸೂರು ಸೀಮೆಯಲ್ಲಿ ಬೇರು ಬಿಟ್ಟು ಬೆಳೆಯಲು ವಿಶೇಷ ಅವಕಾಶಗಳನ್ನು ಕಲ್ಪಿಸಿದರು. ಎಲ್ಲೆಲ್ಲೂ ಕೆರೆ ಕಟ್ಟೆ ಕಾಲುವೆ ಸಾಲುಮರ ತೋಪು ಛತ್ರ ದೇವಸ್ಥಾನ ಇವುಗಳು ಅಭಿವೃದ್ಧಿಹೊಂದಿ ರಾಜ್ಯವು ಒಂದು ಧರ್ಮಕ್ಷೇತ್ರವೋ ಎಂಬಂತೆ ಕಂಗೊಳಿಸಿತು. ಮಹಾರಾಜರು ಪಂಡಿತ ಮಂಡಲಿಗೆ ಮುಕ್ತಹಸ್ತ ರಾಗಿ ದಾನಮಾಡಿ **ಕಲಿಯುಗದ ದಾನಶೂರ ಕರ್ಣ** ಎಂಬ ಪ್ರಖ್ಯಾತಿಗೆ ಪಾತ್ರರಾದರು. ಮೈಸೂರಿನ ಕೀರ್ತಿ ಹಿಂದೂಸ್ಥಾನದಲ್ಲಿ ಎಲ್ಲೆಲ್ಲೂ ವ್ಯಾಪಿಸಿತು.

ಮಹಾರಾಜರ ಪ್ರಾರಂಭದ ಹತ್ತು ವರ್ಷಗಳ ಆಳ್ವಿಕೆಯು ಹೀಗೆ ಅಗಾಧ ವೈಭವದಿಂದ ನಡೆದು ಮುಂದಿನ ಹತ್ತು ವರ್ಷಗಳಲ್ಲಿ ಅದು ಸ್ವಲ್ಪ ತೊಂದರೆಗೆ ಈಡಾಯಿತು. ರಾಜ್ಯದಲ್ಲಿ ಪ್ರಬಲರಾಗಿದ್ದ ಕೆಲಮಂದಿ ದುಷ್ಟರು ಅಲ್ಲಲ್ಲೇ ಹಾವಳಿ ಮಾಡಲಾರಂಭಿಸಿದರು; ಪ್ರಜೆಗಳ ನೆಮ್ಮದಿಗೆ ಭಂಗವುಂಟಾಯಿತು. ರಾಜ್ಯಾಡಳಿತದ ಬಿಗಿ ತಪ್ಪಿತೆಂಬ ದೂರು ಕಂಪೆನಿಯ ಸರ್ಕಾರದವರಿಗೂ ಮುಟ್ಟಿತು. ಆ ಸಂದರ್ಭದಲ್ಲಿ ತಾವು ರಾಜ್ಯಾಡಳಿತದಲ್ಲಿ ಪ್ರವೇಶಿಸಿ ಅದನ್ನು ಸರಿಪಡಿಸದಿದ್ದರೆ ರಾಜ್ಯವು ಕೈತಪ್ಪಿ ಅನಾಯಕವಾಗುವುದೆಂದು ಅವರಿಗೆ ತೋರಿತು. ಒಡನೆಯೇ ಗೌರ್ನರ್ ಜನರಲ್ ಸಾಹೇಬನು, ಕಮಿಷನರೆಂಬ ಅಧಿಕಾರಿಯನ್ನು ನಿಯಮಿಸಿ, ಆತನಿಗೆ ರಾಜ್ಯಾಡಳಿತವನ್ನು ವಹಿಸಿದನು. ಹೀಗೆ ಮೈಸೂರು ಸಂಸ್ಥಾನದ ಆಡಳಿತವು ೧೮೩೧ನೆಯ ಅಕ್ಟೋಬರು ತಿಂಗಳಲ್ಲಿ ದಸರಾ ಮಹೋತ್ಸವ ಕಾಲದಲ್ಲೇ ಬ್ರಿಟಿಷ್ ಕಮಿಷನರ ಪಾಲನೆಗೆ ಒಳಪಟ್ಟಿತು.

ರಾಜಮನೆತನಕ್ಕೆ ರಾಜಸಿಂಹಾಸನವನ್ನು ದೊರಕಿಸುವುದರಲ್ಲಿ ಹೇಳಲಾಗದ ಕಷ್ಟನಷ್ಟಗಳನ್ನು ಅನುಭವಿಸಿದ್ದ ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಪರಿಶ್ರಮವು ಕೇವಲ ಮೂವತ್ತೇ ವರ್ಷಗಳೊಳಗಾಗಿ, ಹೀಗೆ ಪರಿಣಮಿಸಿದುದು ಶ್ರೀ ಮುಮ್ಮಡಿ ಪ್ರಭುಗಳಿಗೆ ಅಧಿಕ ಸಂತಾಪವನ್ನುಂಟು ಮಾಡಿತು. ಹಾಗೆ ಕಳೆದುಹೋದ ಪ್ರಭುತ್ವದ ಅಧಿಕಾರವನ್ನು ಪುನಃ ವಶಪಡಿಸಿಕೊಳ್ಳಬೇಕೆಂದು ಮಹಾರಾಜರು ಅಂದಿನಿಂದ ಹಠ ತೊಟ್ಟು ದೀರ್ಘಪ್ರಯತ್ನ ನಡೆಯಿಸಿದರು; ಗೌರ್ನರ್ ಜನರಲ್ ಸಾಹೇಬರ ಬಳಿಗೆ ಅರ್ಜಿಗಳನ್ನೂ ತಮ್ಮ ಕಡೆಯ ವಕೀಲರನ್ನೂ ಮೇಲೆ ಮೇಲೆ ಕಳುಹಿಸಿ ವಾದ ನಡೆಯಿಸಿದರು. ಅಲ್ಲಿ ಏನೂ ಸಾರ್ಥಕವಾಗದಿರಲು ಇಂಗ್ಲೆಂಡು ದೇಶದ ಪಾರ್ಲಿಮೆಂಟ್ ಸಭೆಗೂ ತಮ್ಮ ಬೇಡಿಕೆಯನ್ನು ಕಳುಹಿಸಿದರು. ಅಲ್ಲಿಯೂ ಮಹಾರಾಜರ ಕಡೆಯ ವಕೀಲರುಗಳು ವಾದಿಸಿ ರಾಜ್ಯವನ್ನು ಪೂರ್ವದ ರಾಜಮನೆತನಕ್ಕೆ ದೊರಕಿಸುವ ಪ್ರಯತ್ನ ಮಾಡಿದರು. ಆದರೂ ಏನೂ ಪ್ರಯೋಜನವಾಗಲಿಲ್ಲ

ಹೀಗೆ ಈ ವ್ಯವಹಾರವು ಮೂವತ್ತುನಾಲ್ವತ್ತು ವರ್ಷಕಾಲ ನಡೆಯಿತು. ಮಹಾರಾಜರು ಬೇಸರಗೊಳ್ಳದೆ ಅಷ್ಟು ಕಾಲವೂ ಅಗಾಧ ಪ್ರಯತ್ನ ನಡೆಯಿಸಿದರು. ಈ ಮಧ್ಯೆ ತಮಗೆ ಪುತ್ರಸಂತಾನವಿಲ್ಲದ ಚಿಂತೆಯೂ ಅವರನ್ನು



ಶ್ರೀ ವಾಣೀವಿಲಾಸ ಸನ್ನಿಧಾನದ

**ಶ್ರೀಮನ್ಮಹಾರಾಣೀ ರೀಜಂಟರು**

[ಪುಟ ೧೭೦



ಆಳಿದ ಶ್ರೀಮನ್ಮಹಾರಾಜರು

**ಶ್ರೀಮನ್ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಒಡೆಯರವರು.**

[ಪುಟ ೧೧೫

ಬಾಧಿಸತೊಡಗಿತು. ಹೀಗಿರುವಲ್ಲಿ, ಹಿಂದೂ ದೇಶದ ಆಡಳಿತವನ್ನು ಕಂಪೆನಿ ಸರ್ಕಾರದಿಂದ ವಿಕ್ಟೋರಿಯಾ ಮಹಾರಾಣಿಯವರು ವಹಿಸಿಕೊಂಡಾಗ ಕೊಟ್ಟ ತಹನಾಮೆಯು ಅವರಿಗೆ ಲೇಶಮಾತ್ರ ಆಶೋತ್ತರವನ್ನುಂಟು ಮಾಡಿತು. ಅದರಲ್ಲಿ ದೇಶೀಯ ಸಂಸ್ಥಾನಗಳ ಅರಸರಿಗೆ ಔರಸ ಪುತ್ರರಿಲ್ಲ ದಿದ್ದ ಸಂದರ್ಭದಲ್ಲಿ ಅವರು ದತ್ತುಪುತ್ರರನ್ನು ಪಡೆದು ತಮಗೆ ಹಕ್ಕುದಾರ ರನ್ನು ಕಲ್ಪಿಸಿಕೊಳ್ಳಬಹುದು ಎಂದಿತ್ತು. ಅದನ್ನು ಅನುಸರಿಸಿ ಮಹಾರಾಜರು ಶ್ರೀ ಚಾಮರಾಜ ಒಡೆಯರೆಂಬ ರಾಜಪುತ್ರರನ್ನು ದತ್ತುಮಾಡಿಕೊಂಡು, ಅವ ರನ್ನು ತಮ್ಮ ಆಸ್ತಿಗೂ ರಾಜಸಿಂಹಾಸನಕ್ಕೂ ಬಾಧ್ಯರಾಗುವಂತೆ ಬ್ರಿಟಿಷ್ ಸರ್ಕಾರದವರು ಅನುಮತಿಸಬೇಕೆಂದು ಪುನಃ ಅರಿಕೆಮಾಡಿಕೊಂಡರು.

ಬ್ರಿಟಿಷ್ ಪಾರ್ಲಿಮೆಂಟಿನವರಿಂದ ಅದೂ ಬೇಗನೆ ಅಂಗೀಕಾರ ವಾಗಲಿಲ್ಲ. ಬಹು ಕಾಲ ಅರ್ಜಿಗಳ ಮೂಲಕವೂ ವಕೀಲರ ಮೂಲಕವೂ ಇಂಗ್ಲೆಂಡಿನ ಪತ್ರಿಕೆಗಳ ಮೂಲಕವೂ ವ್ಯವಹಾರ ನಡೆದ ಮೇಲೆ ಮೈಸೂರು ಸಿಂಹಾಸನದ ಹಕ್ಕುದಾರರಿಗೇ ಆ ರಾಜ್ಯವನ್ನು ವಹಿಸಿಕೊಡಬೇಕಾದುದು ನ್ಯಾಯವೆಂಬ ತೀರ್ಮಾನವು ಪಾರ್ಲಿಮೆಂಟಿನಿಂದ ಅಂಗೀಕಾರವಾಯಿತು. ಆವೇಳೆಗೆ ಶ್ರೀಚಾಮರಾಜ ಒಡೆಯರವರೂ ರಾಜಯೋಗ್ಯವಾದ ವಿದ್ಯಾಬುದ್ಧಿ ಗಳನ್ನು ಸಂಪಾದಿಸಿ ಪ್ರಬುದ್ಧರಾಗಿದ್ದರು. ಅವರಿಗೆ ದಿವ್ಯ ಸುಮುಹೂರ್ತದಲ್ಲಿ ಶ್ರೀ ಕೆಂಪನಂಜಮ್ಮಣ್ಣಿಯವರೆಂಬ ಕನ್ಯಾಶಿರೋಮಣಿಯೊಂದಿಗೆ ವಿವಾಹ ಮಹೋತ್ಸವವೂ ನೆರವೇರಿದ್ದಿತು.

ಮಹಾರಾಣಿ ಕೆಂಪನಂಜಮ್ಮಣ್ಣಿಯವರು ಮೈಸೂರು ಅರಮನೆಯಲ್ಲಿ ಗೃಹಲಕ್ಷ್ಮಿಯಾಗಿ ಪದಾರ್ಪಣ ಮಾಡಿದ ಶುಭ ಮುಹೂರ್ತದ ಮಹಿಮೆ ಯಿರಬಹುದು! ಆವರೆಗೆ ಐವತ್ತು ವರ್ಷಗಳಿಂದ ಕಂಪೆನಿಯ ಸರ್ಕಾರದ ಮತ್ತು ವಿಕ್ಟೋರಿಯಾ ಮಹಾರಾಣಿಯವರ ಆಡಳಿತಕ್ಕೆ ಒಳಪಟ್ಟಿದ್ದ ಮೈಸೂರು ರಾಜ್ಯ ಭಾರವನ್ನು ಶ್ರೀ ಚಾಮರಾಜ ಒಡೆಯರವರಿಗೆ ವಹಿಸತಕ್ಕದ್ದೆಂದು ೧೮೮೧ನೆಯ ಇಸವಿ ಮಾರ್ಚಿ ೧ನೆಯ ತಾರೀಖಿನ ದಿನ ಬ್ರಿಟಿಷ್ ಸರ್ಕಾರದಿಂದ ಒಂದು ರಾಜಶಾಸನವು ಹೊರಟಿತು. ಅದೇ ತಿಂಗಳು ೨೫ನೆಯ ತಾರೀಖಿನ ಒಂದು ಶುಭ ದಿನದ ಶುಭ ಮುಹೂರ್ತದಲ್ಲಿ ಪಟ್ಟಾಭಿಷೇಕ ಮಹೋತ್ಸವವೂ ನಡೆಯಿತು. ಪ್ರಭು ಚಾಮರಾಜೇಂದ್ರರು ಸಿಂಹಾಸನಾರೋಹಣ ಮಾಡಿ ರಾಜ್ಯವನ್ನು

ಆಳಲಾರಂಭಿಸಿದರು. ಆವರೆಗೆ ಎಷ್ಟೋ ದಿನಗಳಿಂದ ಶಿಶುಗಳ ಎಳೆ ನೋಟ ತಿಳಿ ನಗುಗಳನ್ನು ಕಾಣದಿದ್ದ ಅರಮನೆಯಲ್ಲಿ, ಎಷ್ಟೋ ಕಾಲಗಳಿಂದ ತೊಟ್ಟಿಲನ್ನು ಕಟ್ಟಿ ತೂಗಿ ಸಂತೋಷ ಪಡೆಯದಿದ್ದ ಆ ರಾಜಗೃಹದಲ್ಲಿ, ಅದೆಷ್ಟೋ ವರ್ಷಗಳಿಂದ ಎಳೆ ಮಕ್ಕಳು ಅಳುವ ಮಂಜುಳ ಸ್ವರವನ್ನೇ ಕೇಳಿ ಅರಿಯದಿದ್ದ ಆ ಗೃಹ ದೇವತೆಗಳು ಶ್ರೀ ವಾಣೀವಿಲಾಸ ಸನ್ನಿಧಾನದ ಮಹಾರಾಣಿಯವರ ಪುಣ್ಯೋದಯದಿಂದ ಆ ಸೌಭಾಗ್ಯವನ್ನು ಕಾಣುವಂತಾದುದು ರಾಜಬಂಧುಗಳ ಮತ್ತು ಪ್ರಜೆ ಪರಿವಾರಗಳ ಸಂತೋಷವನ್ನು ನೂರುಮಡಿ ಹೆಚ್ಚಿಸಿತು.

ಶ್ರೀ ಚಾಮರಾಜೇಂದ್ರರ ರಾಜ್ಯಭಾರವನ್ನು ಬ್ರಿಟಿಷ್ ಸರ್ಕಾರದವರು ಮೆಚ್ಚಿಕೊಂಡು ಮೈಸೂರು ರಾಜ್ಯಾಡಳಿತವನ್ನು ರಾಜಮನೆತನಕ್ಕೆ ಹಿಂದಿರುಗಿ ಒಪ್ಪಿಸಿದ ಅಗಾಧ ಕೀರ್ತಿಯು ತಮಗೆ ಸಂದಿತೆಂದು ಸಂತೋಷಭರಿತರಾದರು. ಈ ಮಹಾರಾಜರ ಸುಖಮಯವಾದ ಆಳ್ವಿಕೆಯು ದೇಶದ ಪ್ರಜೆಗಳ ಜೀವಿತದ ಮಟ್ಟವನ್ನು ಬಹುಮಟ್ಟಿಗೆ ಹೆಚ್ಚಿಸಿ ಕೀರ್ತಿಯನ್ನು ಗಳಿಸಿತು.

ಮಹಾರಾಣೀ ವಾಣೀವಿಲಾಸ ಸನ್ನಿಧಾನದವರು ಮಹಾರಾಜರವರ ಗೃಹಲಕ್ಷ್ಮಿಯಾಗಿ ಮೂರು ಮಂದಿ ಪುತ್ರರನ್ನೂ ಮೂರು ಮಂದಿ ಪುತ್ರಿಯರನ್ನೂ ಪಡೆದು ಅರಮನೆಯನ್ನು ಗೋಕುಲವನ್ನಾಗಿಸಿದರು. ಎಷ್ಟೋ ಕಾಲಗಳಿಂದ ಔರಸ ಸಂತತಿಯನ್ನು ಕಾಣದಿದ್ದ ಅರಮನೆಯಲ್ಲಿ ಮಕ್ಕಳ ಬಾಲಲೀಲೆ ಅಂಬೆಗಾಲು ತೊದಲು ಮಾತುಗಳ ಸೌಭಾಗ್ಯವನ್ನು ಬೆಳಗಿಸಿದ ಮಹಾರಾಣಿ ಕೆಂಪನಂಜಮ್ಮಣ್ಣಿಯವರು ಮೈಸೂರಿನ ಭಾಗ್ಯಲಕ್ಷ್ಮಿಯಲ್ಲವೆ?

ಸಂಸಾರದಲ್ಲಿ ಸುಖವೂ ಕಷ್ಟವೂ ಒಂದಾದ ಮೇಲೊಂದು ಸಮುದ್ರದ ತೆರೆಗಳಂತೆಯೂ ಹಗಲು ರಾತ್ರಿಗಳಂತೆಯೂ ತಪ್ಪದೆ ಬರುತ್ತಿರುವುದು ಪ್ರಪಂಚ ಧರ್ಮವಷ್ಟೆ? ಇದು ದೈವ ನಿಯಾಮಕವಾದದ್ದು. ಅರಮನೆಯಲ್ಲಿ ಸಿಂಹಾಸನವನ್ನೇರಿ ಆಳುವ ರಾಜನಾಗಲೀ ಬೀದಿಯಲ್ಲಿಯ ಕಡುಬಡವನಾಗಲೀ ಈ ವಿಧಿ ನಿಯಮವನ್ನು ಮೀರಿ ನಡೆಯಲು ಸಾಧ್ಯವಿಲ್ಲ. ಮಹಾರಾಣಿಯವರು ಪತಿಯೊಂದಿಗೂ ಮಕ್ಕಳೊಂದಿಗೂ ಕೂಡಿ ಸಂಸಾರ ಜಲಧಿಯಲ್ಲಿ ಪ್ರಯಾಣಮಾಡುತ್ತಿದ್ದಾಗ ನಡು ಕಡಲಲ್ಲಿ ಹಡಗು ಮುಳುಗುವುದೆಂದು ಯಾರು ತಾನೆ ತಿಳಿದಿದ್ದರು! ಹತವಿಧಿಯು ಚಾಮರಾಜೇಂದ್ರರನ್ನು ಮೂವತ್ತೆರಡನೆಯ ವಯಸ್ಸಿನಲ್ಲೇ ಕೊಂಡೊಯ್ದನು. ಮಹಾರಾಣಿಯವರು

ಮಾತ್ರವಲ್ಲ, ಅರಮನೆಯ ರಾಜಬಂಧುಗಳು ಮಾತ್ರವಲ್ಲ, ದೇಶವೇ ದುಃಖ ಸಮುದ್ರದಲ್ಲಿ ಮುಳುಗಿಹೋಯಿತು.

ಚಾಮರಾಜೇಂದ್ರರ ಗಂಡು ಮಕ್ಕಳಲ್ಲಿ ಹಿರಿಯರಾದ ಶ್ರೀಕೃಷ್ಣ ರಾಜೇಂದ್ರ ಒಡೆಯರಿಗೆ ಆಗ ಇನ್ನೂ ಕೇವಲ ಚಿಕ್ಕವಯಸ್ಸು. ಹತ್ತು ವರ್ಷದ ಬಾಲ್ಯವಯಸ್ಕರಾದ ರಾಜಕುಮಾರರಿಗೆ ರಾಜ್ಯವಾಳಲು ಸಾಮರ್ಥ್ಯ ವಿಲ್ಲದ್ದರಿಂದ ರಾಜ್ಯವನ್ನು ನೋಡಿಕೊಳ್ಳಲು ಪುನಃ ಕಮಿಷನರನ್ನು ಎಲ್ಲಿ ನಿಯಮಿಸಿ ಬಿಡುವರೋ, ಮುಂದೆ ಅದು ಎಷ್ಟು ಕಾಲಕ್ಕೆ ರಾಜವಂಶಕ್ಕೆ ಹಿಂದಿರುಗುವುದೋ ಎಂದು ದೇಶದಲ್ಲಿ ಸಕಲರೂ ಭಯಭೀತರಾಗಿದ್ದರು. ಅಂತಹ ಸಂದರ್ಭದಲ್ಲಿ ಮಹಾಮಾತೃಶ್ರೀ ವಾಣಿವಿಲಾಸ ಸನ್ನಿಧಾನದ ಮಹಾರಾಣಿಯವರೇ ತಮ್ಮ ಪತಿವಿಯೋಗ ದುಃಖವನ್ನು ನುಂಗಿಕೊಂಡು, ಬಾಲರಾಜರು ಯುಕ್ತವಯಸ್ಸಿಗೆ ಬರುವವರೆಗೆ ರಾಜ್ಯಭಾರದ ಕಾರ್ಯವನ್ನು ತಾವೇ ನಿರ್ವಹಿಸುವ ಧೈರ್ಯಮಾಡಿದರು. ಮಕ್ಕಳ ಪೋಷಣೆಯ ಭಾರವನ್ನು ಮಾತ್ರವಲ್ಲದೆ ರಾಜ್ಯದ ಪ್ರಜೆಗಳ ಪೋಷಣೆಯ ಭಾರವನ್ನೂ ಹೊರುವ ಧೈರ್ಯಮಾಡಿದರು. ಮಹಾರಾಣಿಯವರ ಈ ಧೈರ್ಯವನ್ನೂ ಸಾಹಸ ಮನೋವೃತ್ತಿಯನ್ನೂ ಕಂಡು ಸಂತೋಷಿಸಿದ ಬ್ರಿಟಿಷ್ ಸರ್ಕಾರದವರು, ಎಳೆಯ ಮಹಾರಾಜಾ ಕೃಷ್ಣರಾಜ ಒಡೆಯರವರು ಪ್ರಬುದ್ಧ ವಯಸ್ಕರಾಗು ವವರೆಗೂ ವಾಣೀವಿಲಾಸ ಸನ್ನಿಧಾನದವರೇ ರೀಜಂಟರಾಗಿರತಕ್ಕದ್ದೆಂದು ನಿಯಾಮಕ ಮಾಡಿದರು. ಮಹಾರಾಣಿಯವರು ಮುಂದೆ ಎಂಟು ವರ್ಷಗಳ ಕಾಲ ವಿಕ್ಟೋರಿಯಾ ಚಕ್ರವರ್ತಿನಿಯವರಿಗೂ ಬ್ರಿಟಿಷ್ ಸರ್ಕಾರದ ರಾಜ ನೀತಿ ವಿಶಾರದರಿಗೂ ಆಶ್ಚರ್ಯವೆನ್ನಿಸುವಂತೆ ರಾಜ್ಯಭಾರಮಾಡಿ ಎಲ್ಲರನ್ನೂ ತಲೆದೂಗಿಸಿದರು. ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರ ರಾಜ ನೀತಿ ನೈಪುಣ್ಯವನ್ನೂ ಅಸಾಧಾರಣವಾದ ತ್ಯಾಗ ಧೈರ್ಯ ಸಾಹಸಗಳನ್ನೂ ಬ್ರಿಟಿಷ್ ಸರ್ಕಾರದವರು ಮೆಚ್ಚಿ ಅವರಿಗೆ ಸಿ. ಐ. ಎಂಬ ಘನತರವಾದ ಬಿರುದನ್ನೂ ಒಂಬತ್ತು ಗುಂಡುಗಳ ಗೌರವವನ್ನೂ ದಯಪಾಲಿಸಿದರು.

ಮಹಾರಾಣಿಯವರು ತಮ್ಮ ರಾಜ್ಯಭಾರ ಕಾಲದಲ್ಲಿ ನೆರವೇರಿಸಿದ ಕೆಲವು ಮಹತ್ಕಾರ್ಯಗಳನ್ನು ಈ ಸಂದರ್ಭದಲ್ಲಿ ಸೂಚಿಸಬೇಕಾದುದು ಆವಶ್ಯಕ. ರೋಗಗಳೊಳಗೆಲ್ಲ ಅತ್ಯುಗ್ರವಾದುದೆಂದೆನಿಸಿದ ಪ್ಲೇಗು ವ್ಯಾಧಿಯು

ರಾಜ್ಯದಲ್ಲಿ ವ್ಯಾಪಿಸಿ, ಪ್ರಜೆಗಳನ್ನು ಸಾವಿರಗಟ್ಟಲೆಯಾಗಿ ಕವಳಿಸುತ್ತ ಹಾವಳಿ ಮಾಡುತ್ತಿದ್ದಾಗ, ಮಹಾರಾಣಿಯವರು ಕಷ್ಟನಷ್ಟಗಳನ್ನು ಲಕ್ಷ್ಯಮಾಡದೆ ವೈದ್ಯ ಸಹಾಯವನ್ನೂ ಪಥ್ಯ ಅನುಪಾನಾದಿಗಳನ್ನೂ, ಯೋಗ್ಯ ಚಿಕಿತ್ಸೆಯ ಸಾಧನಗಳನ್ನೂ ತಕ್ಕಂತೆ ಒದಗಿಸಿ, ಸಹಸ್ರಾರು ಜನಗಳ ಪ್ರಾಣಗಳನ್ನು ಉಳಿಸಿದರು. ಸಾಧ್ಯವಾದಷ್ಟು ಶೀಘ್ರವಾಗಿ ಆ ರೋಗವು ಶಮನವಾಗಲು ಬೇಕಾದ ಸೌಕರ್ಯಗಳನ್ನೆಲ್ಲ ಕಲ್ಪಿಸಿದರು.

ಶ್ರೀ ಚಾಮರಾಜೇಂದ್ರ ಒಡೆಯರವರು ಒಂದು ದಿನ ಬಂಧು ಜನರೊಂದಿಗೆ ಭೋಜನಮಾಡುತ್ತ ಕುಳಿತಿದ್ದಾಗ, ಅಮೆರಿಕಾ ಖಂಡದಲ್ಲಿರುವ ನಯಾಗರ ಎಂಬ ಜಲಪಾತದಿಂದ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ ಅದನ್ನು ದೀಪಕ್ಕೂ ಕೈಗಾರಿಕೆ ಮುಂತಾದುವುಗಳಿಗೂ ಉಪಯೋಗಿಸುತ್ತ ಆ ದೇಶೀಯರು ಬಹು ಅಭಿವೃದ್ಧಿಗೆ ಬಂದಿದ್ದಾರೆಂಬ ಒಂದು ಮಾತು ಪ್ರಸ್ತಾಪತ್ವೇನ ಬಂದಿತಂತೆ. ಮಹಾ ಉತ್ಸಾಹಶಾಲಿಗಳೂ ರಾಜ್ಯಾಭಿವೃದ್ಧಿಯಲ್ಲಿ ದಕ್ಷರೂ ಆದ ಆ ಪ್ರಭುವರೇಣ್ಯರು ನಮ್ಮಲ್ಲೂ ಇರುವ ಶಿವಸಮುದ್ರದ ಜಲಪಾತದಿಂದ ನಾವೂ ಹಾಗೆ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ ಏಕೆ ಪ್ರಯೋಜನ ಹೊಂದಲಾಗದು ಎಂದು ಯೋಚಿಸಿ ಅದಕ್ಕೆ ತಕ್ಕ ಸಲಹೆಗಳನ್ನು ಪಡೆದರಂತೆ. ಆದರೆ ಕಾರ್ಯಪ್ರಾರಂಭವಾಗಿ ಅದರ ಫಲವು ದೃಷ್ಟಿಗೋಚರವಾಗುವುದಕ್ಕೆ ಮೊದಲೇ ವಿಧಿಯು ಅವರನ್ನು ಸೆಳೆದೊಯ್ದನು. ತಮ್ಮ ಪತಿಯ ಅಭಿಲಾಷೆಯನ್ನು ಕಾರ್ಯರೂಪಕ್ಕೆ ತರಬೇಕೆಂದು ಕುತೂಹಲಪಟ್ಟು ಮಹಾರಾಣಿಯವರು ಆ ಶಾಸ್ತ್ರವನ್ನು ತಿಳಿದ ಪ್ರವೀಣರಿಂದ ಅದಕ್ಕೆ ಆವಶ್ಯಕವಾದ ಸಲಹೆಗಳನ್ನು ಪಡೆದು ಕಾರ್ಯನಿಪುಣರನ್ನು ನಿಯಮಿಸಿ ಯಂತ್ರಸಾಮಗ್ರಿಗಳ ಮೂಲಕ ಆ ಮಹಾಕಾರ್ಯವು ಕೈಗೂಡುವಂತೆ ಏರ್ಪಡಿಸಬೇಕೆಂದು ಆಜ್ಞಾಪಿಸಿದರು. ಅಲ್ಲದೆ, ಅದಕ್ಕೆ ಬೇಕಾಗುವಷ್ಟು ಧನ ಸಹಾಯವನ್ನೂ ರಾಜಭಂಡಾರದಿಂದ ಒದಗಿಸಿ, ಆ ಕಾರ್ಯವನ್ನು ಒಂದು ಅಮೂಲ್ಯ ದೇಶೋದ್ಧಾರಕ ಸಾಮಗ್ರಿಯನ್ನಾಗಿ ರೂಪಿಸುವ ಧೈರ್ಯಮಾಡಿದರು. ಇಂದು ಮೈಸೂರು ಸಂಸ್ಥಾನವು ಪಡೆದಿರುವ ಉನ್ನತಿಗೂ ಕಲಾಪ್ರಗತಿಗೂ ಈ ವಿದ್ಯುಚ್ಛಕ್ತಿಯ ಸೌಕರ್ಯವೇ ಮೂಲಾಧಾರವಾದ ಅಭಿವೃದ್ಧಿಸಾಧನವೆನ್ನುವುದಕ್ಕೆ ಏನಾದರೂ ಸಂದೇಹವಿದೆಯೇ?

ಮನೆಯಲ್ಲಿಯ ಮಕ್ಕಳಿಗೆ ಪ್ರಾಪ್ತವಾಗುವ ರೋಗಗಳನ್ನು ಹೋಗಲಾಡಿಸಿ ಅವರು ಅರೋಗ ದೃಢಕಾಯರಾಗಿರುವಂತೆ ನೋಡಿಕೊಳ್ಳಬೇಕಾದುದು ಪ್ರತಿಯೊಬ್ಬ ಗೃಹಸ್ಥನ ಮತ್ತು ಗೃಹಿಣಿಯ ಪರಮ ಧರ್ಮವಲ್ಲವೆ! ಮೈಸೂರು ರಾಜ್ಯವೆಂಬ ಗೃಹಕ್ಕೆ ಗೃಹಿಣಿಯಾಗಿ ಬೆಳಗಿದ ಮಹಾ ಮಾತೃಶ್ರೀಯವರು ತಮ್ಮ ರಾಜ್ಯದಲ್ಲಿಯ ಪ್ರಜೆಗಳ ಯೋಗಕ್ಷೇಮ ಚಿಂತನೆಮಾಡತಕ್ಕುದೂ ತಮ್ಮ ಕರ್ತವ್ಯವೆಂದು ತಿಳಿದು, ಶ್ರೀ ವಿಕ್ಟೋರಿಯಾ ಮಹಾರಾಣಿಯವರ ಹೆಸರಿನಲ್ಲಿ, 'ವಿಕ್ಟೋರಿಯಾ ಆಸ್ಪತ್ರೆ' ಎಂಬ ರೋಗ ಚಿಕಿತ್ಸಾ ಗೃಹವೊಂದನ್ನು ಬಹು ದ್ರವ್ಯ ವ್ಯಯಮಾಡಿ ನಿರ್ಮಿಸಿದರು. ಅದನ್ನು ಕೇಂದ್ರವಾಗಿಟ್ಟುಕೊಂಡು ಈಚೆಗೆ ದೇಶದಲ್ಲಿ ಸಹಸ್ರಾರು ರೋಗ ಚಿಕಿತ್ಸಾಗೃಹಗಳು ನಿರ್ಮಾಣವಾಗಿವೆ. ಆದರೂ ಅದೊಂದರಲ್ಲೇ ಈವರೆಗೆ ಲಕ್ಷಾಂತರ ಮಂದಿ ತಮ್ಮ ರೋಗ ರುಜಿನಗಳನ್ನು ನೀಗಿಕೊಂಡು ಆರೋಗ್ಯಭಾಗ್ಯವನ್ನು ಗಳಿಸಿ ಇದ್ದಾರೆ.

ಇಷ್ಟು ಮಾತ್ರವಲ್ಲದೆ ಮಾರೀಕಣಿವೆ ಕೆರೆಯೇ ಮುಂತಾದ ಅನೇಕ ಕೆರೆ ಕಟ್ಟೆಗಳನ್ನೂ ಇತರ ಅನೇಕಾನೇಕ ಅಭಿವೃದ್ಧಿ ಕಾರ್ಯಗಳನ್ನೂ ನಡೆಯಿಸಿ, ಮಹಾರಾಣಿಯವರು ಆ ಎಂಟು ವರ್ಷಕಾಲದಲ್ಲಿ ದೇಶದಲ್ಲಿ ನಡೆದ ಸಕಲ ಶ್ರೇಯಸ್ಸಿಗೂ ಪ್ರೇರಕರೂ ಸೂತ್ರಧಾರಿಗಳೂ ಆಗಿದ್ದರು.

ಎಲ್ಲಕ್ಕಿಂತಲೂ ಮಿಗಿಲಾಗಿ ಮಹಾ ಮಾತೃಶ್ರೀ ವಾಣೀವಿಲಾಸ ಸನ್ನಿಧಾನದ ಮಹಾರಾಣಿಯವರು ನಮ್ಮ ದೇಶಕ್ಕೆ ದಯಪಾಲಿಸಿದ ಅಸಾಮಾನ್ಯ ಸೌಭಾಗ್ಯವೆಂದರೆ ದಿವ್ಯ ಜೀವರತ್ನವಾದ ನಮ್ಮ ಶ್ರೀಮನ್ನಾಲ್ವಡಿ ಕೃಷ್ಣಭೂಪರು. ದೇಶ ದೇಶಾಂತರ, ಖಂಡ ಖಂಡಾಂತರಗಳವರಿಂದ ಯಾವ ಮಹನೀಯರು ರಾಜಶ್ರೇಷ್ಠ, ರಾಜರ್ಷಿ, ಆದರ್ಶ ಮಹಾರಾಜ, ಆಧುನಿಕ ಜನಕ ಮಹಾರಾಜ, ತತ್ವದರ್ಶಿ ಮಹಾರಾಜ ಎಂಬೀ ಘನತರವಾದ ಪ್ರಶಂಸೆಗಳನ್ನು ಪಡೆದರೋ, ಯಾವ ಮಹನೀಯ ಪ್ರಭುಗಳು ಮೈಸೂರನ್ನು ಭಾರತ ದೇಶದ ಇತರ ಎಲ್ಲಾ ಸಂಸ್ಥಾನಗಳಲ್ಲೂ ಶ್ರೇಷ್ಠವೆನ್ನಿಸಿದ್ದು ಮಾತ್ರವಲ್ಲದೆ ಬ್ರಿಟಿಷ್ ಪ್ರಾಂತಗಳಿಗೇ ಆದರ್ಶರಾಜ್ಯವೆನ್ನಿಸಿದರೋ, ಅಂತಹ ರಾಜವರೇಣ್ಯರನ್ನು ಹೆತ್ತು ಪೋಷಿಸಿ ದೇಶಕ್ಕೆ ದಯಪಾಲಿಸಿದ ಶ್ರೀ ವಾಣೀವಿಲಾಸ ಸನ್ನಿಧಾನದವರನ್ನು ಪ್ರಥಮ ರಾಜ್ಯಲಕ್ಷ್ಮಿ ದೇವಾಜಮ್ಮಣ್ಣಿಯವರಂತೆಯೂ,

ದ್ವಿತೀಯ ರಾಜ್ಯಲಕ್ಷ್ಮಿ ಲಕ್ಷ್ಮಮ್ಮಣ್ಣಿಯವರಂತೆಯೂ ದೇಶೋದ್ಧಾರ ಮಾಡಿದ ತೃತೀಯ ರಾಜ್ಯಲಕ್ಷ್ಮಿ ಎಂದು ಗೌರವಿಸಲು ಏನಾದರೂ ಸಂದೇಹವುಂಟೆ?

ಈ ಮೂವರು ಪೂಜ್ಯ ಮಹಿಳೆಯರಿಂದ ಮೈಸೂರು ದೇಶಕ್ಕೆ ಉಂಟಾದ ಪ್ರಯೋಜನವು ಅತಿಶಯವಾದುದು. ಹೊರಗೆ ತಿರುಗಿ ಎಲ್ಲರೊಂದಿಗೆ ಸಂಭಾಷಣೆ ನಡೆಯಿಸಿ, ಅಭಿವೃದ್ಧಿ ಸಾಧನಗಳನ್ನು ಕುರಿತು ಚರ್ಚಿಸಿ, ಸಲಹೆ ಪಡೆದು, ರಾಜಕಾರ್ಯವನ್ನು ನಿರ್ವಹಿಸಲು ಶಕ್ತರಾದ ಪುರುಷರು ಮಾಡುವ ರಾಜ್ಯಪಾಲನಾ ಕಾರ್ಯವೇ ಎಷ್ಟೋ ಕಷ್ಟವೆನಿಸುವುದು! ಹೀಗಿರುವಲ್ಲಿ, ಅಂತಃಪುರದಿಂದ ಹೊರಕ್ಕೆ ಬಾರದೆ, ಕಿವಿಯನ್ನೇ ಕಣ್ಣನ್ನಾಗಿ ಉಪಯೋಗಿಸಿ ಕೊಂಡು ಬೇರೊಬ್ಬರ ಮೂಲಕ ಕೇಳಿ, ಲಕ್ಷಾಂತರ ಪ್ರಜೆಗಳ ಕ್ಷೇಮಚಿಂತನೆಯನ್ನು ತಲೆಗೆ ಹಚ್ಚಿಕೊಂಡು ಪಡಬೇಕಾಗಿರುವ ಕಷ್ಟವು ವರ್ಣಿಸಲು ಸಾಧ್ಯವಿಲ್ಲದುದು; ಅಲ್ಲವೆ? ಅದರಲ್ಲೂ, ಏನೋ ವ್ಯವಸ್ಥಿತ ರಾಜ್ಯವನ್ನು ಕಾಪಾಡಿಕೊಂಡು ಹೋಗುವ ಕಾರ್ಯವಲ್ಲ; ಹಿಂದಿನ ಇಬ್ಬರು ಮಹಾರಾಣಿಯವರ ಕಾಲದಲ್ಲಿದ್ದಂತೆ, ಪ್ರಬಲ ಶತ್ರುಗಳು ಸರ್ವಭಕ್ಷಕ ತಿಮಿಂಗಿಲಗಳಂತೆ ರಾಜ್ಯವನ್ನು ನುಂಗಲೂ ರಾಜವಂಶದ ಮಾನ ಪ್ರಾಣಗಳನ್ನು ಅಪಹರಿಸಲೂ ಹೊಂಚುತ್ತ ಕುಳಿತ ಗಂಡಾಂತರ ಕಾಲಗಳಲ್ಲಿ ಅದನ್ನು ಕಾಪಾಡಿಕೊಳ್ಳತಕ್ಕುದೇ ರಾಜನೀತಿ ವಿಚಕ್ಷಣರೂ ಶೌರ್ಯ ಔದಾರ್ಯ ಸಂಪನ್ನರೂ ಆದ ರಾಜಪುರುಷರಿಗೂ ಅಶಕ್ಯವೆನಿಸುವ ಸಂದರ್ಭವುಂಟು; ಹೀಗಿರುವಲ್ಲಿ ಅಂತಹ ಗಂಡಾಂತರಗಳಿಗೆಲ್ಲ ತಲೆಗೊಟ್ಟು ಅಂಜದೆ ಅಳುಕದೆ ಕಾರ್ಯಸಾಧನೆಮಾಡಿ ಇಂದಿನ ಮೈಸೂರು ಪ್ರಜೆಗಳಿಗೆ ಸುಖ ಸಂತೋಷಗಳನ್ನು ದೊರಕಿಸಿ ಕೊಟ್ಟಿರುವ ಈ ಮೂವರು ಮಹಾ ಮಾತೃಶ್ರೀಗಳವರ ಮಹೋಪಕಾರವು ಮಿತಿಯಿಲ್ಲದುದಲ್ಲವೆ? ಬೆಲೆಯಿಲ್ಲದುದಲ್ಲವೆ?

# ಹಿನ್ನುಡಿ

ಶ್ರೀಮನ್ಮಾಲ್ವಡಿ ಕೃಷ್ಣರಾಜೇಂದ್ರರು ಮೂವತ್ತೆಂಟು ವರ್ಷಕಾಲ ಧರ್ಮದಿಂದ ರಾಜ್ಯಭಾರಮಾಡಿ ನಮ್ಮ ದುರ್ದೈವದಿಂದ ಇದೇ ೧೯೪೦ನೆಯ ಆಗಸ್ಟ್ ೩ನೆಯ ತಾರೀಖಿನ ದಿನ ಪರಂಧಾಮವನ್ನೈದಿದರು. ಇವರ ನಿಧನ ದಿಂದ ದೇಶಕ್ಕಾದ ನಷ್ಟವನ್ನು ಇಷ್ಟೇ ಎಂದು ಗಣಿಸಲು ಸಾಧ್ಯವಿಲ್ಲ. ಮೈಸೂರು ದೇಶಕ್ಕೆ ಮಾತ್ರವಲ್ಲ, ಅಖಂಡ ಭಾರತದೇಶಕ್ಕೇ ಶ್ರೀಮನ್ಮಹಾರಾಜಾ ಶ್ರೀಕೃಷ್ಣರಾಜ ಒಡೆಯರವರು ಒಂದು ಅಮೂಲ್ಯ ನಿಧಿಯಂತಿದ್ದು ಕಣ್ಮರೆ ಯಾದರೆಂದು ದೇಶವಿದೇಶದ ಸಕಲ ಪ್ರಮುಖ ಜನರೂ ತಮ್ಮ ಸಂತಾಪವನ್ನು ವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ಮೈಸೂರು ದೇಶಕ್ಕೆ ಸಂಭವಿಸಿದ ನಷ್ಟ ವಂತೂ ಅಪಾರವಾದುದು. ಇದನ್ನು ಪರಿಹರಿಸಿ ದೇಶವನ್ನು ಸುರಕ್ಷಿತಗೊಳಿಸ ತಕ್ಕುದು ಸಾಮಾನ್ಯ ಕಾರ್ಯವಲ್ಲ. ಆದರೆ ಈಗ ಶ್ರೀ ಚಾಮುಂಡಾಂಬಿಕೆಯ ಪರಮಾನುಗ್ರಹದಿಂದಲೂ ಮೈಸೂರು ದೇಶೀಯರ ಪುಣ್ಯೋದಯದಿಂದಲೂ ಮಹಾ ಪ್ರತಿಭಾಶಾಲಿಗಳೂ ರಾಜನೀತಿ ವಿಚಕ್ಷಣರೂ ದಿವ್ಯ ತೇಜಸ್ವಿಗಳೂ ಆದ ಶ್ರೀಮಜ್ಜಯಚಾಮರಾಜ ಒಡೆಯರವರು ಪ್ರಭುಗಳಾಗಿ ನಮಗೆ ದೊರೆ ತಿದ್ದಾರೆ. ಅವರು ಮೈಸೂರು ರಾಜವಂಶಕ್ಕೆ ಕುಲಕ್ರಮಾಗತವಾಗಿ ಲಭ್ಯ ವಾದ ರತ್ನಸಿಂಹಾಸನವನ್ನು ಇದೇ ವಿಕ್ರಮನಾಮ ಸಂವತ್ಸರದ ಭಾದ್ರಪದ ಶುದ್ಧ ಸಪ್ತಮಿಗೆ ಸರಿಯಾದ ೧೯೪೦ನೆಯ ಸೆಪ್ಟಂಬರು ೮ನೆಯ ತಾರೀಖು ಭಾನುವಾರ ಅಧಿರೋಹಣಮಾಡಿ, ರಾಜ್ಯಪರಿಪಾಲನೆಮಾಡಲು ಧರ್ಮದಂಡ ವನ್ನು ಸ್ವೀಕರಿಸಿ, ಪ್ರಜೆಗಳಿಗೆ ತಮ್ಮ ರಾಜಸಂದೇಶವನ್ನು ಪ್ರಸಾದಿಸಿದ್ದಾರೆ. ಇನ್ನು ಮೈಸೂರಿನ ಪ್ರಜೆಗಳಿಗೆ ಭಯವೆಲ್ಲಿಯದು !

ರಾಜ್ಯಕ್ಕೆ ಧರ್ಮಾತ್ಮರೂ ಸದ್ವಂಶೋದ್ಭವರೂ ಸದ್ಗುಣಸಂಪನ್ನರೂ ವಿದ್ಯಾವಿನಯಾದಿ ಪ್ರತಿಭಾನ್ವಿತರೂ ಆದ ಪ್ರಭುಗಳು ದೊರೆಯುವುದು ಪ್ರಜೆಗಳ ಪುಣ್ಯೋದಯ. ಸಕಲ ಸದ್ಗುಣಭರಿತರಾಗಿ ಭಗವದನುಗ್ರಹದಿಂದ ನಮಗಿಂದು ಪ್ರಭುಗಳಾಗಿ ದೊರೆತಿರುವ ಶ್ರೀಜಯಚಾಮರಾಜ ಒಡೆಯ ರವರು ಮೈಸೂರನ್ನು ಸಕಲ ವಿಧಗಳಲ್ಲೂ ಅಭಿವೃದ್ಧಿಗೆ ತರಲು ಕೃತಸಂಕಲ್ಪ ರಾಗಿರುವರೆಂಬುದು, ಅವರು ದಯಪಾಲಿಸಿರುವ ರಾಜಸಂದೇಶದಿಂದಲೇ ವ್ಯಕ್ತವಾಗುತ್ತದೆ.

## ಪಟ್ಟಾಭಿಷೇಕ ಕಾಲದಲ್ಲಿ ದಯಪಾಲಿಸಿದ

## **ನಮ್ಮ ಪ್ರಭುವರ್ಯರ ಶುಭ ಸಂದೇಶ**

* * *

"ನಾನು ನನ್ನ ಹಿರಿಯರ ಸಿಂಹಾಸನವನ್ನೇರುವ ಈ ವ್ರತಸಮಾರಂಭವನ್ನು, ನನ್ನನ್ನೂ, ನನ್ನ ಜೀವಮಾನವನ್ನೂ, ನನ್ನ ಸಕಲ ಸರ್ವಸ್ವವನ್ನೂ ಮೈಸೂರು ಸಂಸ್ಥಾನದ ಜನರ ಸೇವೆಗಾಗಿ ಸಮರ್ಪಣ ದೀಕ್ಷೆಯೆಂಬುದಾಗಿ ಎಣಿಸುತ್ತೇನೆ. ಇದರಲ್ಲಿ ನನ್ನೊಬ್ಬನ ಪ್ರಯತ್ನವೊಂದೇ ಜಯಶಾಲಿಯಾಗಲಾರದೆಂದು ನಾನು ಚೆನ್ನಾಗಿ ಅರಿತಿದ್ದೇನೆ. ನಿಮ್ಮ ನೆರವು, ನಿಮ್ಮ ಸಹಕಾರ, ನಿಮ್ಮ ನಂಬಿಕೆ, ನಿಮ್ಮ ಪ್ರೇಮ ಇವೆಲ್ಲವೂ ನನಗೆ ಬೇಕು.

ನನ್ನ ವಶಕ್ಕೆ ಒಪ್ಪಿಸಿರುವ ಪವಿತ್ರ ಕರ್ತವ್ಯದ ನಿರ್ವಹಣೆಯಲ್ಲಿ ತೇಜಸ್ಸನ್ನೂ ಶಕ್ತಿಯನ್ನೂ ಭಗವಂತನು ನನಗೆ ಅನುಗ್ರಹಿಸಲಿ; ಮತ್ತು ಆತನ ವರಪ್ರಸಾದಗಳು ಯಥೇಷ್ಟವಾಗಿ ಮೈಸೂರು ಸಂಸ್ಥಾನದ ಪ್ರತಿ ಮನೆ ಮನೆಯಲ್ಲಿಯೂ ಹೊಕ್ಕು ನೆಲಸಿ ಹೊಳೆದು ಬೆಳಗಲಿ."

* * *

ಮೈಸೂರಿನ ಪ್ರಜೆಗಳಾದ ನಮ್ಮ ಪುಣ್ಯೋದಯ! ನಾವು ಇಂದೂ ಇಬ್ಬರು ರಾಜ್ಯಲಕ್ಷ್ಮಿಯರನ್ನು ಪಡೆದಿರುವ ಮಹಾ ಭಾಗ್ಯಶಾಲಿಗಳಾಗಿದ್ದೇವೆ. ಶ್ರೀಮನ್ಮಹಾರಾಜಾ ಜಯಚಾಮರಾಜ ಒಡೆಯರವರಿಗೆ ಹಿತಚಿಂತಕರಾಗಿ, ಹಿತಬೋಧಕರಾಗಿ, ಅವರ ಸಕಲ ವಿಧ ಶ್ರೇಯಸ್ಸಿಗೂ ಬಾಧ್ಯರಾಗಿ ಆಶೀರ್ವದಿಸುತ್ತ, ಅವರನ್ನು ಕಣ್ಣಿಗೆ ರೆಪ್ಪೆಗಳಂತೆ ಸಂರಕ್ಷಿಸುತ್ತಿರುವ ಮಹಾಮಾತೃಶ್ರೀ **ಶ್ರೀ ಲಕ್ಷ್ಮಿವಿಲಾಸ ಸನ್ನಿಧಾನದ ಮಹಾರಾಣಿಯವರೊಬ್ಬರು**; ಪ್ರಭುವರ್ಯರ ಹೃದಯಾಧಿದೇವತೆಯಾಗಿ ಮಹಾಸ್ವಾಮಿಯವರೊಂದಿಗೆ ಪೀಠಾರೋಹಣಮಾಡಿ ಪಟ್ಟಾಭಿಷೇಕ ಮಹೋತ್ಸವದಲ್ಲಿ ಪಾಲುಗೊಂಡ ಮೈಸೂರು **ಮಹಾರಾಣೀ ಶ್ರೀ ಸತ್ಯಪ್ರೇಮಾ ದೇವಿಯವರೊಬ್ಬರು**. ಇವರಿಬ್ಬರು ಸ್ತ್ರೀ ಶಿರೋಮಣಿಯರೂ ನಮ್ಮ ರಾಜವಂಶದ ಇಂದಿನ **ರಾಜ್ಯಲಕ್ಷ್ಮಿಯರು**.



ಶ್ರೀಲಕ್ಷ್ಮೀವಿಲಾಸ ಸನ್ನಿಧಾನದ

**ಶ್ರೀಮನ್ಮಹಾರಾಣಿ ಶ್ರೀಪ್ರತಾಪಕುಮಾರಿ ದೇವಿಯವರು**

ಯುವರಾಜಕುಮಾರ **ಶ್ರೀಜಯಚಾಮರಾಜರೊಂದಿಗೆ.**



ಶ್ರೀಜಯಚಾಮರಾಜ ಒಡೆಯರವರು
ಶ್ರೀಮನ್ಮಹಾರಾಣೀ ಶ್ರೀಸತ್ಯಪ್ರೇಮಾದೇವಿಯವರು.

ಪುರುಷರು ಬಾಹ್ಯಪ್ರಪಂಚದಲ್ಲಿ ಲೋಕ ವ್ಯವಹಾರಕ್ಕಾಗಿ ನಡೆಯಿಸುವ ಕಾರ್ಯಭಾರಗಳಿಗೆಲ್ಲ ಪ್ರತ್ಯಕ್ಷವಾಗಿಯೊ ಪರೋಕ್ಷವಾಗಿಯೊ ಅವರ ಗೃಹ ಲಕ್ಷ್ಮಿಯರೇ ಪ್ರೇರಕರು, ಸೂತ್ರಧಾರಿಗಳು. ಈ ಗೃಹಿಣಿಯರ ಸೂತ್ರಧಾರಕ ಕಾರ್ಯವು ಬಹಿರಂಗವಾಗಿ ಯಾರಿಗೂ ಗೋಚರವಾಗದೆ ಗೋಪ್ಯವಾಗಿಯೇ ಇರಬಹುದು! ಆದರೆ, ಅವರ ಪ್ರೇರಣೆ ಆಶಯ ಸಲಹೆ ಬೆಂಬಲ ಅನುಮೋದನೆ ಮುಂತಾದುವುಗಳ ಹಿನ್ನೆಲೆ ಇಲ್ಲದಿದ್ದರೆ, ಪ್ರಪಂಚದಲ್ಲಿ ಯಾವ ಕಾರ್ಯವೂ ನಡೆಯಲಾರದೆಂದು ಲೋಕಾನುಭವಿಗಳು ಅರಿತಿರುವರು. ಪುರುಷರ ಜೀವಿತ ದೊಂದಿಗೆ ಸ್ತ್ರೀ ಜೀವಿತವು ಹಾಗೆ ಸಮ್ಮಿಳನವಾಗದಿದ್ದರೆ ಲೋಕಜೀವಿತವು ಸುರಕ್ಷಿತವಾಗಿ ಸಾಗಲು ಆಸ್ಪದವಿರಲಾರದು. ಆದುದರಿಂದಲೇ ಜಗನ್ನಿಯಾಮ ಕನು ಮನುಷ್ಯನಿಗೆ ಈ ಮಹಾ ಸೌಭಾಗ್ಯವನ್ನು ದಯಪಾಲಿಸಿ ಲೋಕಯಾತ್ರೆ ಯನ್ನು ಸುಗಮವಾಗಿಸಿರುವನು.

ಅಂದು ಮೈಸೂರಿಗೆ, ದುರ್ದಿನಗಳು ಪ್ರಾಪ್ತವಾಗಿದ್ದಾಗ್ಗೆ ಅದರ ರಕ್ಷಣಾಧಿ ದೇವತೆಯಾಗಿ ಆ ಮೂವರು ರಾಜ್ಯಲಕ್ಷ್ಮಿಯರನ್ನು ಅನುಗ್ರಹಿಸಿ ಅವರ ಮೂಲಕ ಸಕಲ ವಿಧಗಳಿಂದಲೂ ದೇಶವು ರಕ್ಷಣೆಹೊಂದಿ ಅಭಿವೃದ್ಧಿ ಯನ್ನು ಪಡೆಯಲು ಯಾವ ಆ ಸಿಂಹವಾಹಿನಿ, ಮಹಿಷಾಸುರಮರ್ದಿನಿ ಶ್ರೀ ಚಾಮುಂಡೇಶ್ವರಿಯು ಅನುಗ್ರಹಿಸಿದಳೋ, ಆ ಮಹಾಮಾತೆಯು, ಮೈಸೂರಿನ ರಾಜವಂಶಕ್ಕೆ ಕುಲಕ್ರಮಾಗತವಾಗಿ ಪ್ರಾಪ್ತವಾದ ರತ್ನಸಿಂಹಾ ಸನಾರೂಢರಾಗಿರುವ ಶ್ರೀಮಜ್ಜಯಚಾಮರಾಜ ಒಡೆಯರವರ ಮೇಲೆ ಇಂದೂ ಮುಂದೆಯೂ ಅದೇ ಕೃಪಾವರ್ಷವನ್ನು ಸುರಿಸಲಿ! ಆ ಲೋಕ ಮಾತೆಯ ಅನುಗ್ರಹ ಬಲದಿಂದ ಆಳುವ ಮಹಾಸ್ವಾಮಿಯವರು ಶ್ರೀ ಲಕ್ಷ್ಮೀ ವಿಲಾಸ ಸನ್ನಿಧಾನದ ಮಹಾಮಾತೃಶ್ರೀಯವರ ಪರಿಪೂರ್ಣ ಆಶೀರ್ವಾದ ಗಳನ್ನೂ – ಪಟ್ಟದ ಮಹಾರಾಜ್ಞೀ ಶ್ರೀ ಸತ್ಯಪ್ರೇಮಾದೇವಿಯವರ ಬೆಂಬಲ ಸಹಾನುಭೂತಿಗಳನ್ನೂ ಪಡೆದು, ಹೀಗೆ ಇಂದಿನ ಈ ಇಬ್ಬರು ರಾಜ್ಯಲಕ್ಷ್ಮಿ ಯರೂ ಹಿತಚಿಂತಕರಾಗಿ ಬೆಂಬಲಕ್ಕಿರಲು, ಮೈಸೂರು ದೇಶವನ್ನು ಇತೋಽತ್ಯತಿ ಶಯವಾಗಿ ಅಭಿವೃದ್ಧಿಪಡಿಸಲಿ! ರಾಜರ್ಷಿಗಳೆಂದೂ ಆದರ್ಶ ನರಪತಿಗಳೆಂದೂ ಪ್ರಖ್ಯಾತಿಗೊಂಡ ಶ್ರೀ ಕೃಷ್ಣರಾಜೇಂದ್ರ ಸಾರ್ವಭೌಮರ ಸವಿನೆನಪನ್ನು ಸದಾ ಕಣ್ಣೆದುರಿಗಿಟ್ಟುಕೊಂಡು ಅಖಂಡವಾದ ಯಶಸ್ಸಾಮ್ರಾಜ್ಯವನ್ನು ಗಳಿಸಲಿ!

ಪುತ್ರಪೌತ್ರಾದಿ ಅಖಂಡ ಸಂಪತ್ತು ಸೌಭಾಗ್ಯಗಳನ್ನು ಪಡೆದು ಚಿರಕಾಲ ವಿಭವದಿಂದ ರಾಜ್ಯಭಾರ ಮಾಡುವಂತೆ ಮಹಾಮಾತೆ ಶ್ರೀ ಚಾಮುಂಡಾಂಬಿಕೆಯೂ ಶ್ರೀ ನಂಜುಂಡೇಶ್ವರನೂ ಪರಮಾನುಗ್ರಹ ಮಾಡಲಿ.

**ಚಿರಮಭಿವರ್ಧತಾಂ ಯದುಸಂತಾನ ಶ್ರೀಃ**

ಭದ್ರಂ ಶುಭಂ ಮಂಗಳಂ.

---

## ಶ್ರೀಮನ್ಮಹಾರಾಜರವರ ಶ್ರೇಯಃ ಪ್ರಾರ್ಥನೆ.

ಕಾಯೌ ಶ್ರೀ ಗೌರೀ ಕರುಣಾ ಲಹರೀ
ತೋಯ ಜಾಕ್ಷಿ ಶಂಕರೀಶ್ವರೀ ಪ.

ವೈಮಾನಿಕ ಭಾವಾರ್ಚಿತ ಕೋಮಲತರ ಪಾದೇ
ಸೀಮಾತಿಗ ಭೂಮಾಸ್ಪದೆ ಕಾಮಿತಫಲದೇ ೧

ಶುಂಭಾದಿ ಮದಾಂಭೋನಿಧಿ ಕುಂಭಜನಿಭೆ ದೇವೀ
ಜಂಭಾಹಿತ ಸಂಭಾವಿತೆ ಶಾಂಭವಿ ಶುಭವೀ ೨

ಶ್ಯಾಮಾಲಕ ಚಾಮುಂಡಿಕೆ ಶ್ರೀಮಜ್ಜಯಚಾಮ
ನಾಮಾಂಕಿತ ಭೂಮೀಂದ್ರ ಲಲಾಮನ ಮುದದೆ ೩

---

ಸುಬೋಧ ವಿದ್ಯುನ್ಮುದ್ರಣಾಲಯದಲ್ಲಿ ಬಿ. ರಂಗನಾಥರಾಯರು ಮುದ್ರಿಸಿದರು.